। ಶ್ರೀ ಗುರುಬಸವಲಿಂಗಾಯ ನಮಃ ।

ಸಂಪಾದನೆಯ ಗಿರಿರಾಜದೇವರು

ಆಯ್ದು ಸೇರಿಸಿದ ಸಿದ್ಧ...

...

# ಚೆನ್ನಬಸವೇಶ್ವರದೇವರ ವಚನಗಳು (೩೦)

ಸಂಪಾದಕರು

ಪಿ. ಎಂ. ಗಿರಿರಾಜು, ಎಂ.ಎ., ಬಿ.ಎಲ್.
ಸಂಸ್ಥಾಪಕ ಸಂಪಾದಕ 'ಶರಣಸಂತಾನ'
1654, ಕಜೀರ್‌ರೋಡ್, ಮೈಸೂರು - *570 001*

ಪ್ರಕಾಶಕರು
ಶ್ರೀ ಜಗದ್ಗುರು ಮುರುಘರಾಜೇಂದ್ರ ಗ್ರಂಥಮಾಲೆ
ಶ್ರೀ ಬೃಹನ್ಮಠ, ಚಿತ್ರದುರ್ಗ - 577 502
೧೯೯೪

**ಚೆನ್ನಬಸವೇಶ್ವರದೇವರ ವಚನಗಳು (೩೦)(ಸಟೀಕಾ)**

ಷಟ್ಸ್ಥಲಚಕ್ರವರ್ತಿ ಚೆನ್ನಬಸವೇಶ್ವರದೇವರು ಕಂಡು ಉಂಡು ಕರುಣಿಸಿದ
ಪ್ರಾಚೀನ ಪ್ರಾಮಾಣಿಕ ವಚನಾಗಮಗಳೊಳಗಣ ೩೦ ಅನುಭಾವ ವಚನಗಳು

**Channa Basaveswara Devara (30) Vacanagalu**

The Mystic sayings of Channa Basaveswara Deva.
a mediaeval mystic of Lingavanta Religion.
Compiled edited and commentated by
P M Giri Raju, M A BL Mysore -570 001


| | |
|---|---|
| Publishers | Sri Jagadguru Murugha Rajendra Granthamale<br>Sri Bruhanmutt Chitradurga-577 502 (Karnataka) |
| ಸಂಪಾದಕರು | ಪಿ.ಎಂ. ಗಿರಿರಾಜು, ಎಂ. ಎ. ಬಿ.ಎಲ್.<br>ಸಂಸ್ಥಾಪಕ ಸಂಪಾದಕ 'ಶರಣಸಂತಾನ'<br>೧೬೫೪ ಕಬೀರ್‌ರೋಡ್, ಮೈಸೂರು - ೫೭೦ ೦೦೧ |
| ಪ್ರಕಾಶಕರು | ಶ್ರೀ ಜಗದ್ಗುರು ಮುರುಘರಾಜೇಂದ್ರ ಗ್ರಂಥಮಾಲೆ<br>ಶ್ರೀ ಬೃಹನ್ಮಠ, ಚಿತ್ರದುರ್ಗ - ೫೭೭ ೫೦೨ |
| ಪ್ರಕಾಶನ | ಮೊದಲ ಸಂಪಾದನೆ ಮೊದಲ ಮುದ್ರಣ<br>೫ ೧೦ ೧೯೯೪ರ ಶ್ರೀ ಚೆನ್ನಬಸವೇಶ್ವರದೇವರ ಸ್ಮರಣೋತ್ಸವ<br>ಶ್ರೀ ಜಗದ್ಗುರು ಮುರುಘರಾಜೇಂದ್ರ ಬೃಹನ್ಮಠ, ಚಿತ್ರದುರ್ಗ |
| ಎಲ್ಲ ಹಕ್ಕುಗಳು | ಪಿ ಎಂ ಗಿರಿರಾಜು, ಮೈಸೂರು |
| ಪುಟಗಳು | ಡೆಮ್ಮಿ ೧/೧೬ ಪುಟಗಳು ೫೨ ಪ್ರತಿಗಳು ೧೦೦೦ |
| ಬೆಲೆ | ರೂ. ೧೦/- |
| ಮುದ್ರಣ | ಲಕ್ಷ್ಮಿ ಮುದ್ರಣಾಲಯ ದೂರವಾಣಿ ೬೬೧೬೧೨೩<br>ಚಾಮರಾಜಪೇಟೆ, ೫ನೆಯ ಮುಖ್ಯ ರಸ್ತೆ, ಬೆಂಗಳೂರು-೫೬೦ ೦೧೮ |

# ವಿಷಯಸೂಚಿಕೆ

## ದಾಸೋಹಭಕ್ತಿ ಬಿನ್ನಪ

ಸಕಲ ಜೀವಾವಳಿಗೆ ಲೇಸನೆ ಬಯಸುವ ಮಹಾಮನೆಯದಲ್ಲಿ ಶ್ರೀ ಗುರು ಬಸವೇಶ್ವರದೇವರು ಕರ್ನಾಟಕದಲ್ಲಿ ಲಿಂಗವಂತಧರ್ಮವನ್ನು ೧೨ನೆಯ ಶತಮಾನದಲ್ಲಿ ಸಂಸ್ಥಾಪಿಸಿದರು. ಜಾತವೇದಿಗಳೂ, ಸರ್ವಾವಧಾನಿಗಳೂ, ಅತಿಶಯಮಹಿಷ್ಠಾನ ಶ್ರೇಷ್ಠಾನ ಗಳುಳ್ಳವರೂ ಆದ ಬಸವರು ಧರ್ಮದ ಹಿಂದು ಇಂದು ಮುಂದುಗಳನ್ನು ತ್ರಿಕಾಲಜ್ಞಾನದಿಂದ ವಿಶ್ಲೇಷಿಸಿ ಅಂದು ಪ್ರಚಲಿತವಾಗಿದ್ದ (ಉತ್ತರಕಾಲದಲ್ಲಿ ಬ್ರಾಹ್ಮಣ ಪ್ರಜ್ಞೆ-ಸಂಸ್ಕೃತಿ-ಪರಂಪರೆ ಗಳ ಮೇಲೂ ಅತಿಶಯಪರಿಣಾಮಗೈದ) ಶ್ರವಣಧರ್ಮದ ವಿಗ್ರಹಾರಾಧನೆ-ದಾಸಾಲಯ-ಅರ್ಚಕ ಗಳ ಪ್ರಜ್ಞೆ-ಸಂಸ್ಕೃತಿ-ಪರಂಪರೆಗಳನ್ನು ಬ್ರಾಹ್ಮಣಧರ್ಮದ ವೇದಾಧಿಕ್ಯ-ಯಜ್ಞಾಧಿಕ್ಯ-ಪುರೋಹಿತಾಧಿಕ್ಯ ಗಳ ಪ್ರಜ್ಞೆ-ಸಂಸ್ಕೃತಿ-ಪರಂಪರೆಗಳನ್ನು ನಿರಾಕಾರಪೂರ್ವಕವಾಗಿ ನಿರಸನಗೈಯಲೆಂದೆ ಅಂಗದ ಮೇಲೆ ಸದಾ ಧರಿಸಿ ತಾನೇ ಅರ್ಚಿಸಿ ಅರ್ಪಿಸಬೇಕಾದ ಇಷ್ಟಲಿಂಗದ ಮಹಾಶುಚಿಕಲ್ಪನೆಯನ್ನೂ ಲಿಂಗವಂತಮಹಾಧರ್ಮದ ಅನುಪಮ ಮಹಾಲಕ್ಷಣದ ಪಂಚವರುವ ಸಹಜಶಿವಯೋಗಸಿದ್ಧಿಗಳನ್ನೂ ಬಾವನ್ನ ಆಚಾರಗಳನ್ನೂ ಕೃಪೆಗೈದರು. ಆದಿಪ್ರಮಥ ಅನಾದಿಸದ್ಭಕ್ತ ಶ್ರೀಗುರುಬಸವೇಶ್ವರದೇವರ ಶುಚಿಕ್ರಾಂತಿಯಲ್ಲಿ ನಿಜಪಂಚ ಆಚಾರ್ಯರುಗಳೆನಿಸಿದ 'ಬಸವ-ಪ್ರಭು-ಚನ್ನಬಸವ-ಸಿದ್ಧರಾಮ-ಮಹಾದೇವಿಯಕ್ಕ ಗಳು ಅನುಕ್ರಮವಾಗಿ 'ಪ್ರವೃತ್ತಭಕ್ತ-ನಿವೃತ್ತವಿರಕ್ತ-ಯುವಕ-ಸೇವಾವ್ರತಿ-ಸ್ತ್ರೀ ವರ್ಗಗಳ ಮಹಾಪ್ರತಿನಿಧಿಗಳಾಗಿದ್ದಾರೆ. ಚನ್ನಬಸವರ ಸಾವಿರಾರು ಶುಚಿವಚನಗಳು ಪ್ರಾಚೀನ ವಚನಾಗಮಾಚಾರ್ಯರುಗಳು ಸೇರಿಸಿರುವ ಪ್ರಾಚೀನ ಪ್ರಾಮಾಣಿಕ ವಚನಾಗಮಗಳಲ್ಲಿ ಸಿಗುತ್ತವೆ

ಶ್ರೀಚಿತ್ರದುರ್ಗದ ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು. ಮುರುಘರಾಜೇಂದ್ರ ಬೃಹನ್ಮಠ ಮಹಾಸಂಸ್ಥಾನವು ಶ್ರೀ ಗುರುಬಸವೇಶ್ವರದೇವರು ಸ್ಥಾಪಿಸಿದ ಲಿಂಗವಂತಧರ್ಮಪರಂಪರೆಯಲ್ಲಿ ಶಿಕ್ಷಾಶೀಲಾಪ್ತಿ ಶೂನ್ಯಸಿಂಹಾಸನವೆಂಬ ಅದ್ವಿತೀಯ ಅನುಪಮ ಅತಿಶಯ ಅಧಿಕಾರ ಮಹಿಮ್ಮಗಳನ್ನುಳ್ಳದ್ದಾಗಿದೆ.

ಈ ಮಹಾಪರಂಪರೆಯಲ್ಲಿನ ವರ್ತಮಾನದ ಒಂದನೆಯ ಕರ್ತೃಗಳಾಗಿರುವ ಶ್ರೀಮ.ನಿ.ಪ್ರ. ಶಿವಮೂರ್ತಿ ಮುರುಘರಾಜೇಂದ್ರ ಮಹಾಸ್ವಾಮಿಗಳವರು ಅಶೇಷ ಲಿಂಗವಂತಮಹಾಜನಸಮುದಾಯದ ಪ್ರಾಚೀನ ಶಿಷ್ಟ ಪ್ರಜ್ಞ-ಸಂಸ್ಕೃತಿ-ಪರಂಪರೆಗಳ ಪುನರುತ್ಥಾನಕ್ಕಾಗಿ ಸರ್ವಥಾಚಿಪ್ರಯತ್ನಗೈಯ್ಯುತ್ತಿರುವ ಮಹತ್ವಾದನೆಯ ಸತ್ಕೀರ್ತಿಯು ದಿಗಂತವಿಶ್ರಾಂತವಾಗಿದಾ ಗಿರುತ್ತದೆ ಈ ದಿಶೆಯಲ್ಲಿ ಲೋಕವರ್ತನೆಯ ಅನಧಿಕೃತ ತ್ಯಾಜ್ಯ ಧರ್ಮಗ್ರಂಥಗಳ ಸ್ಥಾನದಲ್ಲಿ ಅಧಿಕೃತವಾದ ಅಧಿಕಾರಸಮ್ಮತ ಶ್ರೀಮುದ್ರೆಯುಳ್ಳ ಸತ್ಯಶುದ್ಧವಾದ ಪ್ರಾಮಾಣಿಕ ಧರ್ಮಗ್ರಂಥಗಳನ್ನು ಮಹಾಸಂಸ್ಥಾನವು ಪ್ರಸಾದರೂಪದಲ್ಲಿ ಸಕಲಜೀವಾವಳಿಗಳ ಲೇಸನೆ ಬಯಸುವ ಬಸವಧ್ಯೇಯದಲ್ಲಿ ಪ್ರಕಟಿಸುತ್ತಲಿದೆ ಅದರಂಗವಾಗಿ ಮಹಾಸ್ವಾಮಿಗಳವರ ಆಜ್ಞಾನುವರ್ತನೆಯಲ್ಲಿ ಷಟ್ಸ್ಥಲಚಕ್ರವರ್ತಿ ಅಪಿರಳಿಸ್ಥಾನಿ ಚನ್ನಬಸವೇಶ್ವರದೇವರ ಆಮು ೩೦ ವಚನಗಳನ್ನು ಪ್ರಾಮಾಣಿಕ ವಚನಾಗಮಗಳ ಪ್ರಾಮಾಣಿಕ ಪ್ರಾಚೀನ ಓಲೆಕಟ್ಟು ಹಸ್ತಪ್ರತಿಗಳಿಂದ ಆಯ್ದು ಸಂಶೋಧಿಸಿ ಸಂಪಾದಿಸಿ ಸತ್ಯಶುದ್ಧನಿರ್ವಚನ ಸಹಿತವಾಗಿ ಶ್ರೀ ಚನ್ನಬಸವೇಶ್ವರದೇವರ ಸ್ಮರಣೋತ್ಸವದಲ್ಲಿ ಮಹಾಸಂಸ್ಥಾನ ಶ್ರೀಬೃಹನ್ಮಠದಲ್ಲಿ ಶಿವಪ್ರಕಾಶಗೊಳಿಸಲಾಗುತ್ತಿದೆ

ಮಹಾಸಂಸ್ಥಾನದ ಆಡಳಿತಾಧಿಕಾರಿಗಳಾದ ಶಿವಶ್ರೀ ಎಸ್ ಕೆ ಬಸವರಾಜನ್‌ರವರು ಆದಿಪ್ರಮಥ ಶ್ರೀಬಸವೇಶ್ವರದೇವರ ಮಹಾಪರಂಪರೆಯ ಪುನರುತ್ಥಾನಕಾರ್ಯದಲ್ಲಿ ತನುಮನಪ್ರಾಣಗಳಿಂದ ಪರಮರುಚಿರುಚಿರೂಪತೃಪ್ತಿಗಳಲ್ಲಿ ಸದಾ ಸನ್ನದ್ಧರಾಗಿರುವುದು ಅಶೇಷಲಿಂಗವಂತಮಹಾಜನಸಮುದಾಯಕ್ಕೆ ಪರಮ ಆದರ್ಶವೂ ಅನುಕರಣೀಯವೂ ಆಗಿರುತ್ತದೆ

ಇಂತು ಮಹಾಸಂಸ್ಥಾನದ ಆಜ್ಞಾನುವರ್ತನದಲ್ಲಿ ದಾಸೋಹಂಭಾವ ಬಿನಹಸ್ಮರಣಪೂರ್ವಕ ಶಿವಶರಣುಗಳು

೧೧-೦-೧೯೯೬ ಪ್ರಸ್ತುತ ಆಗಮದ ಸಂಪಾದಕ, ನಿರ್ವಚಕ

[illegible] ಪಿ ಎಂ ಗಿರಿರಾಜು, ಮೈಸೂರು-೫೭೦ ೦೦೧

# ಬಸವ 'ಪ್ರಜ್ಞಾ-ಸಂಸ್ಕೃತಿ-ಪರಂಪರೆ'ಗಳ ಪುನರುತ್ಥಾನ !

*ಎಷ್ಟೆ ಸಾಮಾಜಿಕ, ನೈತಿಕ, ಧಾರ್ಮಿಕ, ಸಾರ್ವಭೌಮಿಕ ಕಟ್ಟಳೆಗಳಿಗೆ ಬದ್ಧನಾಗಿದ್ದರೂ ದುರ್ಬಲರನ್ನು ನಿರ್ದಯೆಯಿಂದ ಶೋಷಿಸಿ ಬದುಕುವ ನರ ಪಶುವಲ್ಲದೆ ಬೇರೆಯಲ್ಲ ! ಸಕಲ ಜೀವಾವಳಿಗೆ ಲೇಸನ್ನೆ ಬಯಸುವ ಶರಣರೆ ಕುಲಜರೆಂದು ಕಾಲಾತೀತ ದೇಶಾತೀತವಾಗಿ ಘೋಷಿಸಿ, ಧರ್ಮಾನುಷ್ಠಾನದ ನೆವದ 'ಹಣ-ಹೊತ್ತು-ಜನ'ಬಲಗಳ ದುರ್ವ್ಯಯಕ್ಕೆ ಸಂಕೋಲೆಯಿಟ್ಟು, ಅರುಹನ್ನೂ ಕುರುಹನ್ನೂ ಕೊಟ್ಟು, ಜಾತಿ-ಕುಲ-ವರ್ಣ-ಆಶ್ರಮ-ಗೋತ್ರ-ನಾಮಗಳ ಮೇಲುಕೀಳಿಲ್ಲದೆ ಎಲ್ಲರಿಗೂ ನಿಜದ 'ಅರಿವು-ಆಚಾರ-ಅನುಭಾವ'ಗಳೆ ಸಾಕಷ್ಟು ಧರ್ಮಸಾಧನವೆಂದು ಬೋಧಿಸಿ, ಕಾಯಕದಾಸೋಹಗಳ ವಜ್ರಕವಚಗಳನ್ನು ತೊಡಿಸಿ ಬಸವರು ಜನ್ಮೋತ್ತಮವಾದಿಗಳ ದುರಾಗ್ರಹಕ್ಕೆ ಬಲಿಯಾಗಿ ಹೋದರು ! ೨೫೦೦ ವರ್ಷಗಳಷ್ಟು ಹಳೆಯ ಬೌದ್ಧಜೈನೇತಿಹಾಸಗಳೂ ಆಗಮಗಳೂ ಸಾಕಷ್ಟು ಸಂರಕ್ಷಿತವಾಗಿ ಉಳಿದಿದ್ದರೂ ಕೇವಲ ೮೫೦ ವರ್ಷಗಳ ಶರಣೇತಿಹಾಸ ವಚನಾಗಮಗಳು ಅನೂಹ್ಯವಾಗಿ ಮಸುಳಿ ಮರೆಯಾಗಿ ಹೋಗಿವೆ. ಧರ್ಮಸಂಸ್ಥಾಪನೆಯ ಅನತಿ ಕಾಲದಲ್ಲಿಯೇ ನಿಷ್ಕಾಯಕ ನಿರ್ಗತಿಕ ನಿರಾಶ್ರಿತರಾಗಿ ಹತ್ತು ದಿಕ್ಕುಗಳಲ್ಲಿಯೂ ಚೆದುರಿಹೋದ ಬಸವಭಕ್ತಾಭಿಮಾನಿಗಳಾದ ಶರಣಪರಂಪರೆಯವರು ಶತಮಾನಗಳ ನಂತರ ಅಷ್ಟಿಷ್ಟು ಚೇತರಿಸಿಕೊಂಡು ಊಹಿಸಿ ಕಲ್ಪಿಸಿ ತಮ್ಮತಮ್ಮಲ್ಲಿಯೆ ಪ್ರಚುರಗೈದ ಕಥಾಖ್ಯಾಯಿಕೆಗಳಿಗೂ ಕಂಠಸ್ಥವಾಗಿ ಪರಂಪರೆಯಲ್ಲಿ ಸಾಗಿ ಬಂದು ಕುಚಿ ಗ್ರಂಥಸ್ಥವಾದ ವಚನಾಗಮಬೋಧೆಗಳಿಗೂ ಹೊಂದಾಣಿಕೆಯೆ ಇಲ್ಲ. ೨೦ನೆಯ ಶತಮಾನದ ಆರಂಭದಲ್ಲಿಯೂ ಅಳಿಲ ಹೋಟಾ ಸಿದ್ಧರಾಮವಚನಗಳು ಹುಟ್ಟಿಕೊಂಡು ಇಂದಿಗೂ ವಾರ್ಸಿಟಿ ಸರ್ಕಾರೀ ಗ್ರಂಥಗಳ ಸಂಪಾದನೆಗಳಲ್ಲಿ ಘಟ್ಟಿಗೊಳ್ಳುತ್ತಾ ನಿಂದಿವೆ ಎಂದ ಮೇಲೆ ಹೆಚ್ಚು ವಿನಂತಿಸಲೇನಿದೆ ಪ್ರಬಲ ಪುರುಷರಾದ ಲಕ್ಕಣ್ಣದಂಡೇಶರ ಕೃತಿಯಲ್ಲಿಯೂ ಬಸವವಚನಗಳಲ್ಲಿ ಎಲ್ಲಿಯೂ ಕಾಣಬರದಂತಹ 'ಬಸವರಿಗೆ ಜಾತವೇದರಿಂದ ಲಿಂಗಧಾರಣ, ಕೂಡಲಸಂಗಮದಲ್ಲಿ ವಿದ್ಯಾಭ್ಯಾಸ' ಇತ್ಯಾದಿ ಕಲ್ಪಿತವಿಚಾರಗಳು ಹಲವೆಡೆ ಪ್ರಚಾರ ಪ್ರಾಬಲ್ಯಗೊಂಡಿವೆ ! ಈ ಹಿನ್ನೆಲೆಯಲ್ಲಿ ಶರಣರ ನಿಜಚಾರಿತ್ರ್ಯಗಳನ್ನು ಸತ್ಯಶುದ್ಧವಾಗಿ ಹೊಸದಾಗಿ ಬರೆಯಬೇಕಾಗಿದೆ ಆದರ ಕಿಂಚಿತ್ ಪ್ರಾಮಾಣಿಕ ಪ್ರಯತ್ನ ಇಲ್ಲಿದೆ !*

# ಲಿಂಗವಂತಧರ್ಮಸಂವಿಧಾನ

| | |
|---|---|
| ಧರ್ಮಗುರು | ಆದಿಪ್ರಮಥ ಮಂತ್ರಪುರುಷ ಶ್ರೀ ಬಸವೇಶ್ವರದೇವರು |
| ಧರ್ಮಗ್ರಂಥ | ಬಸವಪರಂಪರೆಯ ವಚನಾಗಮವಾಙ್ಮಯ |
| ಧರ್ಮದೈವ | ಅರುಹಿನ ಕುರುಹಾದ ಇಷ್ಟಲಿಂಗ |
| | ಅದನ್ನು ಕಂಡು ಕಾಣಿಸುವ ಗುರುಲಿಂಗ |
| | ಅವುಗಳ ಶಿಕ್ಷಾಮೂರ್ತಿ ಜಂಗಮಲಿಂಗ |
| ಧರ್ಮಕ್ಷೇತ್ರ | ಬಸವೋಚಿತವಾದ |
| | ನಿಜವರಿವು-ನಿಜಾಚಾರ-ನಿಜಾನುಭಾವಗಳು |
| | ನೆಲೆವನೆಯಾದ ಸಪ್ತಕ್ಷೇತ್ರ ಕಾಯಕೈಲಾಸ |
| ಧರ್ಮಪೀಠ | ಶಿಕ್ಷಾಶೀಲಾಪ್ತ ಶೂನ್ಯಸಿಂಹಾಸನ |
| ಧರ್ಮಧ್ವಜ | ಷಟ್ಸ್ಥಲಧ್ವಜ |
| ಧರ್ಮಭಾಷೆ | ಕನ್ನಡ |
| ಧರ್ಮಗೀತೆ | ಶರಣರ ವಚನ ಸ್ವರವಚನ ಸಮುಚ್ಚಯ |
| ಧರ್ಮಚಿಹ್ನೆ | ★ |
| ಧರ್ಮತತ್ತ್ವಸಾರ | ನಿಜದ ಅರಿವು-ನಿಜದ ಆಚಾರ-ನಿಜದ ಅನುಭಾವ |
| ಧರ್ಮಲಕ್ಷ್ಯ | ನಿಷ್ಕಲಲಿಂಗನಿಷ್ಠೆ-ಸರ್ವಾಂಗಲಿಂಗಸ್ಥಿತಿ- |
| | ದಾಸೋಹಂ ಸಂಪನ್ನತೆಗಳಿಗೆ ಸಮ್ಮತವಾಗಿ |
| | ಅರಿವು-ಆಚಾರ-ಅನುಭಾವಗಳಿಂದ |
| | ತನುಮನಪ್ರಾಣಗಳ ಶುಚಿಸಂಪಾದನೆ |
| ಧರ್ಮಘೋಷ | ಜಯಜಯ ಬಸವೇಶ ಹರಹರ ಮಹಾದೇವ ! |

# ಶ್ರೀ ಬಸವೇಶ್ವರದೇವರು ಸಂಸ್ಥಾಪಿಸಿದ ಲಿಂಗವಂತಧರ್ಮಪರಂಪರೆ (೩೬ ಪಟ್ಟಗಳು)

[ಕಲ್ಯಾಣಪಟ್ಟವಲ್ಲರಿ]

೧. ಶ್ರೀ ಅಲ್ಲಮ ಪ್ರಭುದೇವರು (ಲೀಲಾವಿಶ್ರಾಂತಿ : ಶ್ರೀಶೈಲ)

೨. ಶ್ರೀ ಚನ್ನಬಸವೇಶ್ವರದೇವರು (ಉಳವಿ)

೩. ಶ್ರೀ ಸಿದ್ಧರಾಮೇಶ್ವರದೇವರು(ಸೊನ್ನಲಿಗೆ)

[ಅಜ್ಞಾತಯುಗಾನಂತರದಲ್ಲಿ ಗೋಸಲ ಪಟ್ಟವಲ್ಲರಿ]

೪ ಶ್ರೀ ಬಸವಪ್ರಭುದೇವರು

೫. ಶ್ರೀ ಆದಿಲಿಂಗೇಶ್ವರದೇವರು

೬. ಶ್ರೀ ಚನ್ನವೀರೇಶ್ವರದೇವರು

೭. ಶ್ರೀ ಹರದನ ಹಳ್ಳಿಯ ಗೋಸಲದೇವರು

೮. ಶ್ರೀ ಶಂಕರದೇವರು

೯. ಶ್ರೀ ದಿವ್ಯಲಿಂಗೇಶ್ವರದೇವರು

೧೦. ಶ್ರೀ ಗೋಸಲ ಚನ್ನಬಸವೇಶ್ವರದೇವರು (ಗುಬ್ಬಿ)

೧೧. ಶ್ರೀ ತೋಂಟದ ಸಿದ್ಧೇಶ್ವರದೇವರು (ಎಡೆಯೂರು)

೧೨. ಶ್ರೀ ನಿರಕ್ಷರ ಬೋಳ ಬಸವೇಶ್ವರದೇವರು (ಮಧ್ಗಿರಿ)

೧೩. ಶ್ರೀ ಸಿದ್ಧಲಿಂಗದೇವರು (ಗುಮ್ಮಳಾಪುರ)

೧೪. ಶ್ರೀ ಸಿದ್ಧವೀರೇಶ್ವರದೇವರು (ಗೂಳೂರು)

೧೫. ಶ್ರೀ ಗಗನ (ಉದ್ದಾನ) ಮಹಾದೇವರು (ಭೈರವದುರ್ಗ)

೧೬. ಶ್ರೀ ಕಟ್ಟಿಗೆಹಳ್ಳಿ ಸಿದ್ಧಲಿಂಗದೇವರು (ತಿಳವಳ್ಳಿ)

ಚಿತ್ರದುರ್ಗ ಶ್ರೀ ಮುರುಘರಾಜೇಂದ್ರ ಮಹಾಮಠದ ಮುರುಘಾಸಮಯಪಟ್ಟವಲ್ಲರಿ)

೭. ಶ್ರೀ ಮುರುಘಾ ಶಾಂತವೀರೇಶ್ವರಸ್ವಾಮಿಗಳು (ಚಿತ್ರದುರ್ಗ) (೧೬೪೦-೧೭೦೩)

೮. ಶ್ರೀ ಇಮ್ಮಡಿ ಮುರುಘಾ ಗುರುಸಿದ್ಧಸ್ವಾಮಿಗಳು (ಆನಂದಪುರ) (೧೭೦೩-೨೯)

೯. ಶ್ರೀ ಸ್ವಾದಿ ಚನ್ನಬಸವಸ್ವಾಮಿಗಳು (ಹಿರೇಮಾಗಡಿ) (೧೭೨೯-೩೦)

೧೦. ಶ್ರೀ ಶಿರಹಟ್ಟಿ ಸಿದ್ಧಲಿಂಗಸ್ವಾಮಿಗಳು (ಚಂಗಡಹಳ್ಳಿ) (೧೭೩೦-೫೬)

೧೧. ಶ್ರೀ ಗುರುಪಾದಸ್ವಾಮಿಗಳು (ಗುರುಮಠಕಲ್ಲು) (೧೭೫೯-೬೦)

೧೨. ಶ್ರೀ ಮೂರುಸಾವಿರದ ಸಣ್ಣಗುರುಪಾದಸ್ವಾಮಿಗಳು (ಚಿತ್ರದುರ್ಗ) (೧೭೬೦-೭೯)

೧೩. ಶ್ರೀ ಮೂರುಸಾವಿರದ ಸಿದ್ಧಲಿಂಗಸ್ವಾಮಿಗಳು (ಹಿರೇ ಮಾಗಡಿ) (೧೭೭೯-೯೦)

ಶ್ರೀ ಒಪ್ಪತ್ತಿನ ಚನ್ನವೀರಸ್ವಾಮಿಗಳು (ತಿಳವಳ್ಳಿ) (೧೭೯೦)

ಶ್ರೀ ವ್ಯಾಕರಣದ ಸಿದ್ಧಲಿಂಗಸ್ವಾಮಿಗಳು (ಹಿರೇಮಾಗಡಿ) (೧೭೯೦-೧೮೦೦)

ಶ್ರೀ ನೈಘಂಟಿನ ಸಿದ್ಧಬಸವಸ್ವಾಮಿಗಳು (ಹಾವೇರಿ) (೧೮೦೦-೨೦)

ಶ್ರೀ ಸಣ್ಣ ಬರಹದ ರಾಚವಟ್ಟಿಸ್ವಾಮಿಗಳು (ಚಿತ್ರದುರ್ಗ) (೧೮೨೦-೩೦)

ಶ್ರೀ ಸಾವಳಿಗೆ ಗುರುಶಾಂತಸ್ವಾಮಿಗಳು (ಚಿತ್ರದುರ್ಗ) (೧೮೩೫-೪೦)

ಶ್ರೀ ಸಣ್ಣಪಾದದ ಚನ್ನವೀರಸ್ವಾಮಿಗಳು (ಚಿತ್ರದುರ್ಗ) (೧೮೪೦-೫೪)

ಶ್ರೀ ಮಹಾಲಿಂಗಸ್ವಾಮಿಗಳು (ಶಿರಸಿಂಗಿ) (೧೮೫೪-೬೦)

ಶ್ರೀ ಹೆಬ್ಬಾಳು ರುದ್ರಸ್ವಾಮಿಗಳು (ಚಿತ್ರದುರ್ಗ) (೧೮೬೦-೮೧)

ಶ್ರೀ ಮುಪ್ಪಿನೇಂದ್ರಸ್ವಾಮಿಗಳು (ಬ್ಯಾಡಗಿ) (೧೮೮೧-೧೯೦೨)

ಶ್ರೀ ಜಯದೇವಸ್ವಾಮಿಗಳು (ದಾವಣಗೆರೆ) (೧೯೦೩-೪೯/೫೬)

ಶ್ರೀ ಜಯವಿಭವಸ್ವಾಮಿಗಳು (ಚಿತ್ರದುರ್ಗ) (೧೯೪೯-೬೪)

ಶ್ರೀ ಮಲ್ಲಿಕಾರ್ಜುನಸ್ವಾಮಿಗಳು (ಹೊಳಲ್ಕೆರೆ) (೧೯೬೪-೯೧/೯೪)

ಶ್ರೀ ಶಿವಮೂರ್ತಿಸ್ವಾಮಿಗಳು (೧೯೯೧-)

## ಲಿಂಗವಂತನು :

- ★ ಸಕಲಜೀವಾತ್ಮರಿಗೆ ಲೇಸನ್ನೇ ಬಯಸುವ ದಯಾಶೀಲನಾಗಿರಬೇಕು.
- ★ ಬಳಸಿ ಬ್ರಹ್ಮಚಾರಿ, ಉಂಡು ಉಪವಾಸಿ, ಸುಳಿದು ನಿರ್ಗಮನಿಯಾಗಿರಬೇಕು
- ★ ಎಂಟು ಆವರಣ, ಆರುಸ್ಥಲ, ಐದು ಆಚಾರಗಳನ್ನು
  ಅರಿಯಬೇಕು ನಡೆಯಬೇಕು ನೋಡಬೇಕು.
- ★ ನಿಜದ ಅರಿವಿನಿಂದ ಮನಶುಚಿ, ನಿಜದ ಆಚಾರದಿಂದ ತನುಶುಚಿಯಾಗಿರಬೇಕು.
- ★ ನಿಜದ ಅನುಭಾವ ನೋಟಶುಚಿಯಿಂದ ಸುಜ್ಞಾನ-ಸತ್ಕ್ರಿಯಾ ಸಮ್ಮತನಾಗಿರಬೇಕು.
- ★ ಬಸವರಲ್ಲಿ ಬಸವಾನುಯಾಯಿಗಳಲ್ಲಿ ಬಸವಸದ್ಬೋಧೆಯಲ್ಲಿ
  ಶ್ರದ್ಧೆ, ನಿಷ್ಠೆ, ಅವಧಾನ, ಅನುಭಾವ, ಆನಂದ, ಸಮರಸಗೊಂಡಿರಬೇಕು
- ★ ಬಸವ, ಪ್ರಭು, ಚನ್ನಬಸವ, ಸಿದ್ಧರಾಮ, ಮಹಾದೇವಿಗಳೆಂಬ ಪಂಚಾಚಾರ್ಯರಲ್ಲಿಯೂ
  ಆ ಶುಚಿಪರಂಪರೆಯ ಎಲ್ಲ ಶರಣರಲ್ಲಿಯೂ ಆದ್ಯಭಕ್ತಿ, ಗೌರವ,
  ಆದರಗೊಂಡಿರಬೇಕು.
- ★ ಎಲ್ಲ ಶುದ್ಧಿ-ಸಿದ್ಧಿ-ಪ್ರಸಿದ್ಧಿಗಳನ್ನು ಶರಣರ ವಚನಬೋಧೆಸಮ್ಮತವಾಗಿಯೇ
  ಸಾಧಿಸಬೇಕು.
- ★ ಮತ್ತಮತಿಯಾಗಿ ಹೊತ್ತುಗಳೆಯದೆ ಶಗ್ಗಶಾಸ್ತ್ರಗಳನ್ನು ಬಿಟ್ಟು ಶಿವಶರಣರ
  ಪ್ರಸಾದಶುಚಿವಚನಗಳನ್ನೆ ನಂಬಬೇಕು.
- ★ ಶಿವಶರಣರ ಶುಚಿವಚನಸದ್ಬೋಧೆಗೆ ಸಮ್ಮತವಾಗಿಯೆ
  ನುಡಿ-ನಡೆ-ನೋಟಗೊಂಡಿರಬೇಕು.

★ ಅಲ್ಪಶ್ರಮ, ಬಹುಫಲಗಳುಳ್ಳ ಶಿವಶರಣರ ಪ್ರಸಾದಶುಚಿವಚನಗಳನ್ನೆ ಸದಾ ಮನನ ಮಾಡಬೇಕು.

★ ಶರಣತತ್ತ್ವಶುಚಿಯುಳ್ಳ, ಸ್ವ ಅನುಭಾವ, ಗುರು ಉಪದೇಶ, ವಚನ ಆಗಮಗಳ ಅರಿವನ್ನೆ ಅರಿಯಬೇಕು.

★ ಕಟ್ಟಿದ ತನ್ನ ಲಿಂಗವೂ ಲಿಂಗ ಕಟ್ಟಿದ ತನ್ನವರೂ ಹೌದು ಹೌದೆನ್ನುವಂತೆ ಬಾಳಬೇಕು.

★ ಅನುಭಾವದ ಹಾಲಹೊಳೆಯಾದ ವಚನಗಳನ್ನೆ ಅರಿತವರಿಂದ ಅರಿತು ಅರಿಯದವರಿಗೆ ಅರುಹಿಸಬೇಕು.

★ ಎಲ್ಲರಲ್ಲಿಯೂ, ಎಲ್ಲೆಡೆಯಲ್ಲಿಯೂ ದೇವರು ಇದ್ದಾನೆ ಎನ್ನದ 'ಅರಿವು-ಆಚಾರ-ಅನುಭಾವ' ಸಂಪನ್ನರಾದ ಸರ್ವಶುಚಿಗಳಾದ ಶರಣರನ್ನೇ ಪಿತೃ-ಋಷಿ-ದೇವರೆನ್ನಬೇಕು.

★ ಲಿಂಗವಂತ ಶುದ್ಧಜ್ಞಾನ-ಸಿದ್ಧಸಂಸ್ಕೃತಿ-ಪ್ರಸಿದ್ಧಪರಂಪರೆಗಳನ್ನೆ ಎತ್ತಿ ಹಿಡಿದು ಒತ್ತಿ ಹೇಳಬೇಕು, ಅನ್ಯ ಭಿನ್ನ ದುರ್ಬಲ 'ಜ್ಞಾನ-ಸಂಸ್ಕೃತಿ-ಪರಂಪರೆ'ಗಳನ್ನು ತ್ಯಜಿಸಬೇಕು.

★ ಶುಚಿಮಾತು-ಶುಚಿಮನ-ಶುಚಿಕೃತಿಗಳಿಂದ ಶಿವಶರಣಸದ್ಬೋಧೆಗಳಿಗೆ ಸಮ್ಮತವಾಗಿ ಬಾಳಬೇಕು.

★ ಎಲ್ಲವನ್ನು ತಿಳಿದರೂ ತನ್ನದನ್ನೆ ಹಿಡಿಯಬೇಕು ಪರಿಪಾಲಿಸಬೇಕು.

★ ಸಕಲಜೀವಾತ್ಮರನ್ನೂ ಬಸವರ ಶುಚಿ 'ನುಡಿ-ನಡೆ-ನೋಟ'ಗಳಿಗೆ ಒಲಿಸಬೇಕು.

★ ಬಸವರ ಆದರ್ಶದಲ್ಲಿ ದೀನದಲಿತದುಃಖಿಗಳನ್ನು ಮೇಲಕ್ಕೆ ಎತ್ತಿ ತನ್ನವರನ್ನಾಗಿಸಿಕೊಳ್ಳಬೇಕು.

## ಸರ್ವಾವಧಾನಪೂರ್ವಕವಾಗಿ
## ಶ್ರೀ ಮುರುಘರಾಜೇಂದ್ರ ಬೃಹನ್ಮಠ ಮಹಾಸಂಸ್ಥಾನದಿಂದ
## ಪ್ರಕಾಶಿತವಾಗುತ್ತಿರುವ
## ಪ್ರಭುಸಂಹಿತೆಯ ಸಂಪ್ರದಾಯಶುದ್ಧ ಮಹಾಗ್ರಂಥಗಳು

ಶ್ರೀ ಸಿದ್ಧರಾಮೇಶ್ವರದೇವರ ಸತ್ಯಶುದ್ಧ ಟೀಕಿನ ಸಮಗ್ರ ಮಹಾವಚನಾಗಮ
ಶ್ರೀ ಬಸವೇಶ್ವರದೇವರ ಸರಳಶುಚಿಟೀಕಿನ ಸಮಗ್ರ ಮಹಾವಚನಾಗಮ
ಲಿಂಗವಂತಧರ್ಮ ಮಹಾನುಭಾವ ಪ್ರಮಾಣಗ್ರಂಥ
ವಚನಾಗಮ ಪರಿಭಾಷಾ ಪ್ರಯೋಗಮಹಾಕೋಶ
ವಚನಾಗಮ ಸಂಪಾದನಾ ಲಕ್ಷಣಶಾಸ್ತ್ರ
ಲಿಂಗವಂತಧರ್ಮ ಪಂಚಸಂಸ್ಕಾರಪದ್ಧತಿ
ಶ್ರೀಬಸವೇಶ್ವರದೇವ ಮಹಾನಾಟಕ ಪ್ರಯೋಗ
ಶ್ರೀಬಸವೇಶ್ವರದೇವಚಾರಿತ್ರ್ಯ ನಿಜಪರಿಚಯ
ಶ್ರೀಬಸವೇಶ್ವರದೇವ ನಿಜಪವಾಡ ಆರ್ಥವಾದ ಕಥಾವಲ್ಲರಿ
ಲಿಂಗವಂತಧರ್ಮಮಹಾಸಂದರ್ಶನ (ಪ್ರಶ್ನೋತ್ತರಿ)
ಶಿವಶರಣ ಶುಚಿವಚನ ಶತಕಮಾಲಿಕೆ
ಶ್ರೀಮನಿಜ ಶ್ರೀ ಮುರುಘರಾಜೇಂದ್ರ ಮಹಾಸಂಸ್ಥಾನ ಮಹಾಪಟ್ಟವಲ್ಲರಿ
ಸಮಗ್ರವಚನಾಗಮ ಶುಚಿಸಂಪಾದನೆ
ಸಮಗ್ರವಚನಾಗಮವಿಹಾರ ಮಹಾಪರಿಚಯ

ಲಿಂಗವಂತನಿಗೆ :

★ *ಜಾತಿ, ವರ್ಣ, ಆಶ್ರಮ, ಕುಲ, ಗೋತ್ರ, ನಾಮವೆಂಬ ಆರುಭ್ರಮೆಗಳ ತಾರತಮ್ಯ*

★ *ಜಾತಿಸೂತಕ, ಜನನಸೂತಕ, ಮರಣಸೂತಕ, ರಜಸ್ಸೂತಕ, ಎಂಜಲಸೂತಕಗಳು ಸಲ್ಲ.*

★ *ವಿಗ್ರಹಾರಾಧನೆ, ಮಧ್ಯವರ್ತಿ ಅರ್ಚಕ, ತೀರ್ಥಯಾತ್ರೆ, ವೇದವಾದ, ಯಜ್ಞಯಾಗ, ದೇವಾಲಯ, ಹರಕೆನೇರಕೆಗಳು ಸಲ್ಲ.*

★ *ಪಂಚಾಂಗ, ಜ್ಯೋತಿಷ್ಯ, ಸ್ವಪ್ನ, ಶಕುನ, ನಿಮಿತ್ತ, ಕಣಿ, ಸಾಮುದ್ರಿಕೆಗಳು ಸಲ್ಲ.*

★ *ಜಾತಕ, ಲಗ್ನ, ವಿಘ್ನ, ಶಾಂತಿಭ್ರಾಂತಿ, ವ್ರತ ಉಪವಾಸ, ಅಷ್ಟಾಂಗ ಕರ್ಮಯೋಗಗಳು ಸಲ್ಲ.*

★ *ಅನ್ಯದೈವಸ್ಮರಣೆ, ಧರ್ಮವಿರುದ್ಧ ಸಂಗ, ಧರ್ಮವಿರುದ್ಧ ಪಾಠಗಳು ಸಲ್ಲ.*

★ *ಅವಿಚಾರಿ, ಅನಾಚಾರಿ, ದುರ್ಭಾವಿಗಳಾದ ತಾಮಸಿಗ ಲಿಂಗವಂತರ ಸಂಗವೂ ಸಲ್ಲ.*

★ *ಮಾಂಸಾಹಾರ, ಮದ್ಯಪಾನ, ನಶೆ, ಅಮಲು, ತೆವಲು, ಪ್ರಾಣಹಿಂಸೆ, ಕೊಲೆಗಳು ಸಲ್ಲ.*

★ *ಜೂಜು, ಮೋಸ, ನಂಬಿಕೆದ್ರೋಹ, ಕ್ರೂರತ್ವ, ಕಪಟಗಳು ಸಲ್ಲ.*

★ *ದೇವತಾರಾಧನೆಯ ನೆವದಲ್ಲಿ ಜೀವನಾವಶ್ಯಕ ಅನ್ನಪಾನೀಯವಸ್ತ್ರಾದಿಗಳನ್ನು ಕೆಡಿಸುವುದು ಸಲ್ಲ.*

★ ಮಂತ್ರ, ತಂತ್ರ, ಯಂತ್ರ, ಭೂತಭ್ರಾಂತಿ, ವಶೀಕರಣ, ವಾಮಾಚಾರಗಳು ಸಲ್ಲ.

★ ಗುರುವಿತ್ತ ಅರುಹಿಗೂ ಅರುಹಿನ ಕುರುಹಿಗೂ ವಿರುದ್ಧವಾದ ಅನ್ಯಭಿನ್ನ ಅರುಹು-ಕುರುಹುಗಳು ಸಲ್ಲ.

★ ಮೂಢಾಚಾರ, ಕಂದಾಚಾರ, ಮೂರ್ಖಾಚಾರ, ಅನಾಚಾರ, ಅನ್ಯಾಚಾರಗಳು ಸಲ್ಲ.

★ ಶರಣತತ್ತ್ವವಿರುದ್ಧವಾದ ಅನ್ಯತೀರ್ಥ-ಅನ್ಯಕ್ಷೇತ್ರ-ಅನ್ಯದೈವ-ಅನ್ಯಲಿಂಗ-ಅನ್ಯಶಾಸ್ತ್ರ - ಅನ್ಯಕರ್ಮಗಳು ಸಲ್ಲ.

★ ಧರ್ಮವಿರುದ್ಧವಾದ, ನೀತಿವಿರುದ್ಧವಾದ, ಲೋಕವಿರುದ್ಧವಾದ ಅನ್ಯಭಿನ್ನವಾದ ಜ್ಞಾನ-ಕರ್ಮ-ಯೋಗಗಳು ಸಲ್ಲ.

★ ಕಣ್ಣುಮುಚ್ಚಿದ ಮೂಢನಂಬಿಕೆಯ ಧರ್ಮವಿರುದ್ಧ ನಡೆನುಡಿನೋಟಗಳು ಸಲ್ಲ.

★ ಎಂಟು ಮದ, ಆರು ವೈರಿ, ನಾಲ್ಕು ಪದವಿ, ದ್ವೈತಾದ್ವೈತವಾದಗಳು ಸಲ್ಲ.

★ ಅನ್ಯಯಾಚನೆ, ಅಪಾತ್ರದಾನ, ಸಂಕಲ್ಪವಿಕಲ್ಪ, ಕಾಲಭ್ರಾಂತಿಗಳು ಸಲ್ಲ.

★ ಲಿಂಗಾಂಗಿನಿಂದೆ, ಪ್ರಸಾದನಿಂದೆ, ಧರ್ಮನಿಂದೆ, ಶರಣನಿಂದೆಗಳು ಸಲ್ಲ.

★ ಸ್ವೇಚ್ಛಾತುರ, ಅರ್ಥಾತುರ, ಕೀರ್ತ್ಯಾತುರಗಳು ಸಲ್ಲ; ಭಕ್ತ್ಯಾತುರ ಬಿಡುವುದು ಸಲ್ಲ.

★ ಲೋಕಾಂತರ, ಜನ್ಮಾಂತರ ಇತ್ಯಾದಿ ಮೂಢನಂಬಿಕೆಗಳು ಸಲ್ಲ.

★ ಶೋಷಕನಾಗುವುದೂ ಸಲ್ಲ; ಶೋಷಿತನಾಗುವುದೂ ಸಲ್ಲ; ಶೋಷಣೆಯನ್ನು ಸಮ್ಮತಿಸುವುದೂ ಸಲ್ಲ.

# ಚನ್ನಬಸವೇಶ್ವರದೇವರ (೩೦) ವಚನಗಳ ಅಕಾರಾದಿ

## ಅಕಾಯಚಾರಿತ್ರ್ಯ ಶರಣಸ್ಮರಣೋತ್ಸವಗಳು

| | |
|---|---|
| ಧರ್ಮಸಂಸ್ಥಾಪಕ ಶ್ರೀ ಬಸವೇಶ್ವರದೇವರ ಸ್ಮರಣೋತ್ಸವ | ಜನವರಿ |
| ಶ್ರೀ ಸಿದ್ಧರಾಮೇಶ್ವರದೇವರ ಸ್ಮರಣೋತ್ಸವ | ಫೆಬ್ರವರಿ |
| ಶ್ರೀ ಗುಹಲ್ಲಮಪ್ರಭುದೇವರ ಸ್ಮರಣೋತ್ಸವ | ಮಾರ್ಚ್ |
| ಶ್ರೀ ಜೇಡರ ದಾಸಮಯ್ಯದೇವರ ಸ್ಮರಣೋತ್ಸವ | ಏಪ್ರಿಲ್ |
| ಶ್ರೀ ಮೇದರ ಕೇತಯ್ಯದೇವರ ಸ್ಮರಣೋತ್ಸವ | ಮೇ |
| ಶ್ರೀ ಮಾದಾರ ಚೆನ್ನಯ್ಯದೇವರ ಸ್ಮರಣೋತ್ಸವ | ಜೂನ್ |
| ಶ್ರೀ ಹರಳಯ್ಯದೇವರ ಮಧುವಯ್ಯದೇವರ ಸ್ಮರಣೋತ್ಸವ | ಜುಲೈ |
| ಶ್ರೀ ಹಡಪದ ಅಪ್ಪಣ್ಣದೇವರ ಸ್ಮರಣೋತ್ಸವ | ಆಗಸ್ಟ್ |
| ಶ್ರೀ ಮಡಿವಾಳ ಮಾಚಯ್ಯದೇವರ ಸ್ಮರಣೋತ್ಸವ | ಸೆಪ್ಟೆಂಬರ್ |
| ಶ್ರೀ ಚನ್ನಬಸವೇಶ್ವರದೇವರ ಸ್ಮರಣೋತ್ಸವ | ಅಕ್ಟೋಬರ್ |
| ಶ್ರೀ ನೀಲಾಂಬಿಕೆದೇವಿ ಗಂಗಾಂಬಿಕೆದೇವಿಯರ ಸ್ಮರಣೋತ್ಸವ | ನವೆಂಬರ್ |
| ಶ್ರೀ ಉಡುತಡಿಯಕ್ಕ ಮಹಾದೇವಿಯರ ಸ್ಮರಣೋತ್ಸವ | ಡಿಸೆಂಬರ್ |

## ಅವಿರಳಜ್ಞಾನಿ - ಷಟ್ಸ್ಥಲಚಕ್ರವರ್ತಿ - ಚಿಕ್ಕದಣ್ಣಾಯಕ
## ಶ್ರೀ ಚನ್ನಬಸವೇಶ್ವರದೇವರ ನಿಜಚಾರಿತ್ರ್ಯಕಥಾಗರ್ಭ

ಅವಿಪ್ರಮಥ, ಅನಾದಿಸದ್ಭಕ್ತ, ಶ್ರೀ ಗುರುಬಸವೇಶ್ವರದೇವರು ಬಾಲಬ್ರಹ್ಮಗಳಾಗಿ ಉಪನಯನಸಂಸ್ಕಾರವನ್ನೊಲ್ಲದೆ ಬಾಗೇವಾಡಿ ಅಗ್ರಹಾರದ ಮಹಾಜನವಿಪ್ರರು ಉಸಿರಾಡುವ ಗಾಳಿಯಲ್ಲಿ ಉಸಿರಾಡಲೊಲ್ಲದೆ ಮಹಾಪ್ರಸ್ಥಾನದಲ್ಲಿ ಗೃಹತ್ಯಾಗಗೈದು ಸೀಮೋಲ್ಲಂಘನಗೈದು ಹದಿಹರೆಯದ ವರೆಗೂ ದೇಶದೇಶಾಂತರ ದ್ವೀಪದ್ವೀಪಾಂತರಗಳಲ್ಲಿನ ತತ್ಕಾಲೀನ ಮಹಾಧರ್ಮಗಳನ್ನು ಪರೀಕ್ಷಿಸುತ್ತ ತತ್ಪೂರ್ವದ ಮಹಾಧರ್ಮಗಳು ಯಾವ ಕಾರಣ, ಕಾಲಗರ್ಭದಲ್ಲಿ ಅಡಗಿಹೋದವೆಂದು ಜಿಜ್ಞಾಸೆಗೈಯುತ್ತ ಶೋಷಕ, ಶೋಷಿತ, ಶೋಷಣೆಗಳಿಲ್ಲದೆ, ಸಕಲಜೀವಾವಳಿಗೆ ಲೇಸನೆ ಬಯಸುವ ಮಹಾಧರ್ಮವೊಂದನ್ನು ಸಂಸ್ಥಾಪಿಸಲು ನಿಶ್ಚಯಿಸಿ ನಿರೀಶ್ವರಸಾಂಖ್ಯ-ಸೇಶ್ವರಯೋಗಗಳೆಂಬ ಸಿದ್ಧಸಮಯದಿಂದಲೆ ಸಿಡಿದೊಗೆದ ಜೈನ-ಬೌದ್ಧಗಳೆಂಬ ಶ್ರಮಣಮತವನ್ನೂ ಪೂರ್ವದಲ್ಲಿ ಧೂಮ್ರಮಾರ್ಗವನ್ನು ಅವಲಂಬಿಸಿ `ವೇದ-ಯಜ್ಞ-ಪುರೋಹಿತ'ರೆ ಜ್ಞಾನ-ಕ್ರಿಯೆ- ಯೋಗಗಳೆನಿಸಿದ (ಮುಂದೆ ಶ್ರಮಣಪ್ರಭಾವದಿಂದ ಅರ್ಚಿಮಾರ್ಗವನ್ನೂ ಅಳವಡಿಸಿಕೊಂಡು `ವಿಗ್ರಹ-ದೇಗುಲ-ಆಗಮಿಕ'ರನ್ನೂ ಒಳಗೊಂಡ) ಶೈವ-ವೈಷ್ಣವ ಪ್ರಭೇದವಿಡಿದ ಬ್ರಾಹ್ಮಣಮತವನ್ನೂ ಬ್ರಾಹ್ಮಣ-ಶ್ರಮಣಗಳೆರಡರಲ್ಲಿನ ಜಡಯೋಗಮಾರ್ಗಗಳನ್ನೂ ನಿರಾಕರಿಸಿ, ಸೋದರಮಾವಂದಿರಾದ ಬಲದೇವದಂಡನಾಯಕರ ಒತ್ತಾಯಕ್ಕೆ ಮಂಗಳವಾಡಕ್ಕೆ ಬಂದು ಸೊಡ್ಡಳ ಬಾಚರಸರಲ್ಲಿ ಕರಣಿಕವೃತ್ತಿಗೊಂಡು, ಸ್ವಸಾಮರ್ಥ್ಯದಿಂದ ಪ್ರಗತಿಗೊಂಡು, ಕಲ್ಯಾಣದಲ್ಲಿ ಪರಮಮಾಹೇಶ್ವರ ಕಳಚುರ್ಯ ಚಕ್ರವರ್ತಿಯ ಭಾವಂದಿರೂ ಪ್ರಧಾನದಂಡನಾಯಕರೂ ಆಗಿ, ಲಿಂಗವಂತಧರ್ಮದ ಅರಿವು-ಆಚಾರ- ಅನುಭಾವಗಳನ್ನು ಸಕಲಜೀವಾವಳಿಗೆ ಲೇಸನೆ ಬಯಸುವ ಹಂಬಲದಲ್ಲಿ ಬೋಧಿಸುತ್ತ, ದಶದಿಶೆಗಳಲ್ಲಿನ ದೂರದೇಶಗಳಿಂದಲೂ ಮಹಾನುಭಾವಿಗಳನ್ನು ಆಕರ್ಷಣೆಗೈಯುತ್ತ ಅವಿಪ್ರಮಥರೆಂದೂ

ಅನಾದಿಸದ್ಭಕ್ತರೆಂದೂ ಜಗದ್ವಿಖ್ಯಾತಿಗೊಂಡರು.

ಬಸವರ ಅನುಜೆಯಾದ ಅಕ್ಕನಾಗಲೆದೇವಿಯರು ತಮ್ಮ ಕುವರರಾದ ಚೆನ್ನಬಸವರೊಡನೆ ಮನಮತಪರಿವರ್ತನೆಗೊಂಡು ಬಸವಾನುಯಾಯಿಗಳಾಗುವಲ್ಲಿ, ಪರಿವರ್ತನೆಗೊಪ್ಪದ ನಿಜಪತಿಶ್ಶೈವನನ್ನು ತ್ಯಜಿಸುವಲ್ಲಿ ನಿಜಸಮಯಪ್ರಮಾಣವೆಂತೆಂದರೆ - ಶ್ರೀಗುರುಬಸವೇಶ್ವರದೇವರ ನಿಜಾನುಯಾಯಿಗಳಾದ ಶ್ರೀಶೈಲಜಗದಾಚಾರ್ಯ ಶ್ರೀಮಲ್ಲಿಕಾರ್ಜುನ ಪಂಡಿತಾರಾಧ್ಯದೇವರ ಶಿವತತ್ತ್ವಸಾರದಲ್ಲಿ

ಶಿವಭಕ್ತನಾಗೆನುತ್ತೊ|ಲ್ವವಿರತಮುಂ ಬುದ್ಧಿವೇಳೆ ಸತಿ ಪತಿಗಂ ತ|
-ದ್ಭವನೊಲ್ಲದಿರ್ದ್ದಡಾಯ|ತನವನು ಮೀರ್ದಲ್ಕೆ ಬಟ್ಟ ಭಕ್ತಿಯ ಕಥದಿಂ ||೨೪||
ಪುರಹರನ ಭಕ್ತಿಯುಂ ನಿಜ|ಪುರುಷಂಗಿಲ್ಲದಿರೆ ಮತ್ತೆ ಪುರುಷೇಚ್ಛೆ ಮೊಳೆ|
-ಸ್ಥಿರದೆ ಸತಿ ಮೀರ್ದಿ ಮೆರ್ದವಳು| ಪುರುಷನನಾತ್ಮದೊಳು ಬಿಟ್ಟು ಭಜಿಪಳು ಶಿವನಂ
ಪುರುಷಪ್ರತಿಕೂಲತ್ವಂ| ಸ್ಥಿರದೋಷಂ ಸತಿಗೆ ದುರ್ಗ್ಗತಿಯನಿಪ್ಪುದು ತ|
-ತ್ಪುರುಷನಭಕ್ತನೆಯಾಗಲು| ಪುರುಷನನುಂ ಮೀರ್ದಿ ಶಿವನನೊಲ್ಪೆವೆಡೆಯೊಳ್
ಅನಸೂಯೆಯು ಮಾಳಾಯಿಯು| ಮುನಿಭಾರ್ಯೆಗಳಾತ್ಮಪತಿಗಳಂ ಮೀರ್ದಿಯೆ ಭ|
-ರ್ಗ್ಗನ ಭಕ್ತಿಯಿಂದೆ ಪಡೆದರು| ಘನತರನಿಜವಾಂಛಿತಾರ್ತ್ಥಫಲಮಂ ಮುನ್ನಂ ||೨೫||

ಬಸವರು ತಮ್ಮ ಸೋದರಳಿಯ ಚೆನ್ನಬಸವರ ಬ್ರಾಹ್ಮಣ್ಯದ ಮೇಲರಿಮೆಯನ್ನು ಜೇರುಸಹಿತ ಕಿತ್ತೊಗೆಯಲು ನಿಜಲಿಂಗಾಂಗಿ ವೃದ್ಧಭಕ್ತರಾದ ಡೋಹರ ಕಾಯಕದ ಕಕ್ಕಯ್ಯಗಳೆಂಬ ನಿಜಶಿಷ್ಯರಿಂದಲೆ ನಿಜದೀಕ್ಷೆಯನ್ನು ಅನುಗ್ರಹಗೈಸಲು ಕಕ್ಕಯ್ಯಗಳ ಬೋಧಾಪ್ರಸಾದದಲ್ಲಿ ಚೆನ್ನಬಸವರು ಅಘೋದಯವೆತ್ತಿದರೆಂದು ಜಗದ್ವಿಖ್ಯಾತವಾಯಿತು. ಸೋದರಿಕೆಯನ್ನು ಅಬ್ಬಾಗಿ ಹೇಳುತ್ತಿದ್ದ ಅಳಿಯ ಚೆನ್ನಬಸವರು ಮಾವಂದಿರಾದ ಶ್ರೀಗುರುಬಸವದೇವರನ್ನು ಮೀರುವ ಮಹಾಪಸ್ಮಾತಪ್ರತಿಭೆಯುಳ್ಳ ಬಾಲಬ್ರಹ್ಮಿಗಳೆ ಆಗಿದ್ದು ಅವಿರಳಜ್ಞಾನಿ ಷಟ್ಸ್ಥಲಚಕ್ರಾನುವರ್ತಿಗಳೆಂದು ಲಿಂಗಾಂಗಿಗಳಿಂದಲೂ ಪರಮೇಶ್ವರ ಪುತ್ರ ಷಣ್ಮುಖನೆ ಷಟ್ಸ್ಥಲಬೋಧಾರ್ಥವಾಗಿ ಚೆನ್ನಬಸವರಾಗಿ ಜನಿಸಿದನೆಂದು ಪೂರ್ವಶೈವಾದಿಗಳಿಂದಲೂ ಸಂಸ್ತುತಿಸಲ್ಪಟ್ಟರು.

ಪೂರ್ವಶೈವಪರಮಮಾಹೇಶ್ವರ ಕಳಚುರ್ಯ ಚಕ್ರವರ್ತಿ ಬಿಜ್ಜಳದೇವರು ನಿಜಾನುಜೆ ನೀಲಲೋಚನೆದೇವಿಯರ ಕೈವಿಡಿದ ಭಾವ ಬಸವೇಶ್ವರದೇವರ ಪ್ರಪಂಚ-ಪರಮಾರ್ಥಗಳ ಅತಿಭಾರವನ್ನು ಹಗುರಗೊಳಿಸಲೆಂದೆ ಚೆನ್ನಬಸವೇಶ್ವರದೇವರಿಗೆ ಚಿಕ್ಕ ದಂಡನಾಯಕ ಪಟ್ಟಾಧಿಕಾರವನ್ನು ಕಟ್ಟಿಕೊಟ್ಟರೂ ಚೆನ್ನಬಸವರು ಸಂಸಾರಚಕ್ರದೊಳಗೆ ಒಳಗಾಗದೆ, ಸತ್ಯರುದ್ರನಾಯಕವಾಗಿ ಚಿಕ್ಕ ದಂಡನಾಯಕ ವೃತ್ತಿಯನ್ನವಲಂಬಿಸಿ ಬಸವರ ಪಾರಮಾರ್ಥಿಕ ಹೊಣೆಹೊರೆಗಳನ್ನು ಹಗುರಗೈಯಲು ಲಿಂಗವಂತಧರ್ಮದ ಮಹಾಪ್ರವರ್ತಕರಾಗಿ ನಿರ್ವಹಣೆಗೈದರು

ಶ್ರೀ ಗುರುಬಸವರು ದ್ವಾಪಾಪ್ತದ್ವಿಃಮಹಾಮಹತ್ತಿನೊಳಗಾದ ನಿಷ್ಟನತುಷ್ಟ ಶಿವಾಚಾರ ಸಂಪತ್ತೆಂಬ ಮಹಾಮತಕ್ಕಾಗಿ ಹೊಚ್ಚಹೊಸ ಅರಿವನ್ನು ಅರುಹಿಸಿ ಬಯಲಿನಿಂದ ಆ ಅರುಹನ್ನು ತೆಗೆದು ಭಾವ, ಮನ, ನೇತ್ರಗಳಿಂದ ಇಳುಹಿಸಿ ಕರಕ್ಕೆ ಕುರುಹಾಗಿ ನೀಡುವ ನಿಜಲಿಂಗದೀಕ್ಷೆಗೆ ಸಮ್ಮತವಾದ ಇಷ್ಟಲಿಂಗವನ್ನು ಸೃಷ್ಟಿಗೈದು ಸದಾ ಅಂಗದ ಮೇಲೆ ಧರಿಸುವ ಮತ್ತೊಂದು ಜಡಶೈವಲಿಂಗವನ್ನು ನೆನೆಯಲೂ ಒಲ್ಲದ ನಿಷ್ಠೆಕಲಿಂಗನಿಷ್ಠೆಯನ್ನೂ, ಆ ಲಿಂಗವನ್ನು ಸರ್ವಾಂಗದಲ್ಲಿ ಭಾವಿಸುವ ಸಾಮುಚಿಪ್ರಜ್ಞೆಯಾದ ಸರ್ವಾಂಗಲಿಂಗಸ್ಥಿತಿಯನ್ನೂ ಅಂತಹ ಅರುಹುಕುರುಹಗಳನ್ನು ಉಳ್ಳ ಸಕಲಲಿಂಗಾಂಗಿಗಳನ್ನು ಸ್ವಯಂಲಿಂಗಸ್ವರೂಪರೆಂದೆ ನಂಬಿ ತಾನು ಧರಿಸಿದ ತನ್ನ ಇಷ್ಟಲಿಂಗಕ್ಕಿಂತಲೂ ತನ್ನವರಾದ ಲಿಂಗಾಂಗಿಗಳನ್ನು ಮಿಗಿಲೆಂದು ಭಾವಿಸಿ ಒಲಿದು ಓಲೈಸುವ ದಾಸೋಹಂ ಸಂಪನ್ನತೆಯನ್ನೂ, ಈ ಮಹಾಪ್ರಜ್ಞೆಗಳನ್ನೂ ಕೂಡಿದ ೩೨ ಚಾರಿತ್ರ್ಯಗಳನ್ನೂ, ೨೧ ದೀಕ್ಷೆಗಳನ್ನೂ, ಅರಿವು-ಆಚಾರ-ಅನುಭಾವಗಳೆಂಬ ಪರಮಶುಚಿಯುಳ್ಳ ತಿಳಿವಳಿಕೆ-ನಡೆವಳಿಕೆ ನೋಟಗಳನ್ನೂ ಅವುಗಳ ಬಗೆಗಿನ ಶ್ರದ್ಧೆ, ನಿಷ್ಠೆ, ಅವಧಾನ, ಅನುಭಾವ, ಆನಂದ, ಸಮರಸವೆಂಬ ಆರು ಸ್ಥಳಗಳ ನೆಲೆಕಲೆಗಳನ್ನೂ, ಶೈವಭಿನ್ನವಾದ ಅರುಹಿನ ಕುರುಹನ್ನು ಅನುಕ್ರಮವಾಗಿ ಗ್ರಹಣ, ದರ್ಶನ, ಸಂಭಾಷಣ, ಮನನ, ಭಾವನೆ, ಜ್ಞಾನಗಳ ಮೂಲಕ ಮೇಲಿಂದ ಮೇಲಕ್ಕೆ ಏರಿಸಿ ಅರುಹನ್ನಾಗಿಸಿ ಬಯಲ ಬಯಲನ್ನಾಗಿಸಿ ಮರಳಿ ಬಯಲಿನ ಅರುಹನ್ನು ಜ್ಞಾನ-ಭಾವ- ಮನ-ದರ್ಶನಗಳ ಮೂಲಕ ಗ್ರಹಣದ ಕುರುಹನ್ನಾಗಿಸುವ ಪಂಚಪರುಷವೇಧೆಯನ್ನೂ, ಪ್ರಾಕೃತ ವೈದಿಕ ಅದ್ವೈತ-ಆಗಮಿಕ

ದ್ವೈತ-ಕರ್ಮಾಷ್ಟಾಂಗಯೋಗ'ಗಳ ನಿರಸನವನ್ನೂ `ಗರ್ಭ-ಜನನ-ದೀಕ್ಷಾ-ಕಲ್ಯಾಣ-ಸಮಾಧಿ' ಪಂಚಸಂಸ್ಕಾರಗಳನ್ನೂ, ಜಾತಿ, ವರ್ಣ, ಆಶ್ರಮ, ಕುಲ, ಗೋತ್ರ, ನಾಮಗಳನ್ನು ನೀಗಿಸಿ ಮೀರಿದ ಸಕಲಲಿಂಗಾಂಗಿಗಳಿಗೆ ಬೋಧಿಸುತ್ತ ಚನ್ನಬಸವೇಶ್ವರದೇವರು ಜ್ಞಾನಮೂರ್ತಿಗಳಾಗಿ ಕಂಗೊಳಿಸುತ್ತಿದ್ದರು. ಪ್ರಾಕೃತ `ಯೋಗ-ಶ್ರಮಣ-ಬ್ರಾಹ್ಮಣ' ರು ಉತ್ತಮಕುಲಾಧೀನವೆಂದು ಆರೋಪಗೈಯದಿರಲೆಂದು ಧರ್ಮಸಂಸ್ಥಾಪಕರಾದ ಶ್ರೀ ಗುರುಬಸವೇಶ್ವರದೇವರು ತಾವು ಸ್ಥಾಪಿಸಿದ `ಶಿಕ್ಷಾಶೀಲ'ವೆಂಬ ಶೂನ್ಯಸಿಂಹಾಸನವನ್ನು ತಾವೇ ಏರಲೊಲ್ಲದೆ ಸುದೀರ್ಘಕಾಲ ಆ ಸಿಂಹಾಸನದ ಮೇಲೆ ಮೂರ್ತಗೊಳ್ಳುವ ಪರಮವಿರಾಗಮೂರ್ತಿಗಾಗಿ ಕಾಯ್ದು ತಮ್ಮಿಂದ ಅನುಗ್ರಹಗೊಂಡ ಅನುಮಿಷಯೋಗಿಯಿಂದ ಸ್ವೀಯಪರೋಕ್ಷಾನುಗ್ರಹಗೊಂಡು ಪ್ರೇತಲಿಂಗಧಾರಿಯಾಗಿ ಬಂದ ಕುಲವರಿಯದ ಬರಿಬತ್ತಲೆಯ ಮಹಾನುಭಾವಿ ಗುಹಲ್ಲಮದೇವರ ಪ್ರೇತಲಿಂಗವನ್ನು ನಿವಾರಿಸಿ ಇಷ್ಟಲಿಂಗವನ್ನು ಚನ್ನಬಸವರಿಂದ ನೀಡಿಸಿ ಶೂನ್ಯಸಿಂಹಾಸನಕ್ಕೆ ಪ್ರಥಮ ಕರ್ತೃವಾಗಿ ಆರೋಹಣಗೈಸಲು ಕಿಂಚಿತ್ಕಾಲ ಕುಳಿತು ಭಕ್ತಜನರನ್ನು ಸಂತುಷ್ಟಗೈದ ಗುಹಲ್ಲಮಪ್ರಭುದೇವರು ಶಿಕ್ಷಾಶೀಲ ಶೂನ್ಯಸಿಂಹಾಸನವನ್ನು ಸಹಜ ವಿರಾಗದಿಂದ ತ್ಯಜಿಸಿ ಮುನ್ನಿನಂತೆ ಸಂಚಾರಲೀಲೆಯಲ್ಲಿ ನಿರ್ಗಮಿಸುವಲ್ಲಿ ಬಸವರ ಭಕ್ತಜನರ ಅಪೇಕ್ಷೆವಿಡಿದು ಗುಹಲ್ಲಮದೇವರು ಚಿಕ್ಕದಣ್ಣಾಯಕ ಚೆನ್ನಬಸವೇಶ್ವರದೇವರಿಗೆ ಶೂನ್ಯಸಿಂಹಾಸನಾಧಿಕಾರವನ್ನು ನೀಡಿ ತೆರಳಲು ಚೆನ್ನಬಸವರು ಶಿಕ್ಷಾಶೀಲ ಶೂನ್ಯಸಿಂಹಾಸನದ ದ್ವಿತೀಯ ಕರ್ತೃಗಳಾಗಿ ಕಂಗೊಳಿಸಿದರು.

ಸೊನ್ನಲಿಗೆಗೆ ದಯಮಾಡಿಸಿ ಪ್ರಾಕೃತಕರ್ಮಯೋಗಿ ಸಿದ್ಧರಾಮರ ಯೋಗ ಗರ್ವವನ್ನು ಶಿಥಿಲಗೈದು ಮರಳಿ ಕಲ್ಯಾಣಕ್ಕೆ ಹಿಂದಿರುಗಿದ ಶ್ರೀಗುರುಬಸವರ ಬಯಕೆಯಂತೆ ತೊಳಲಾಟದಿಂದ ಹಣ್ಣಾಗಿಹೋದ ಸಿದ್ಧರಾಮರನ್ನು ಸೊನ್ನಲಿಗೆಯಿಂದ ಹೊರಡಿಸಿಕೊಂಡು ನಿಜನಿರ್ವಾಣಿ ಗುಹಲ್ಲಮದೇವರು ಕಲ್ಯಾಣಕ್ಕೆ ಬಂದಾಗ ಸರ್ವಶರಣರ ಪರಾಮರ್ಶೆಯಂತೆ ಸಿದ್ಧರಾಮರು ಲಿಂಗಾಂಗಿಗಳಾಗ ಬಯಸಿದಾಗ ಚನ್ನಬಸವೇಶ್ವರದೇವರು ಅವರಿಗೆ ಅರುಹುಕುರುಹುಗಳನ್ನು ಕರುಣಿಸಿ ದೀಕ್ಷಾನುಗ್ರಹಗೈದದ್ದುಂಟು.

ಅನುಭಾವಮಂಟಪದಲ್ಲಿ ಒಮ್ಮೆ ಚೆನ್ನಬಸವರು ಶ್ರೀಗುರುಬಸವೇಶ್ವರದೇವರನ್ನು ತಮಗೆ ಅನುಗ್ರಹಗೈಯಲು ಪ್ರಾರ್ಥಿಸಿದಾಗ ಮುನ್ನ ಕಕ್ಕಯ್ಯಗಳ ಜ್ಞಾನಪುತ್ರರೆನ್ನಿಸಿದ ಚೆನ್ನಬಸವರ ಈ ಅಪೇಕ್ಷೆಯನ್ನು ಪೂರೈಸಲೊಲ್ಲದೆ ವಿನಯದಿಂದಲೆ ಬಸವರು ನಿರಾಕರಿಸಿದ್ದುಂಟು. ಆಗ ಚೆನ್ನಬಸವರು ಬಸವರ ಕೈಗೆ ತಮ್ಮ ಇಷ್ಟಲಿಂಗವನ್ನು ಇತ್ತು 'ಲಕ್ಷಣವುಳ್ಳದ್ದೆ?' ಎಂದು ಪ್ರಶ್ನಿಸಿದಾಗ 'ಕೂಡಲಚೆನ್ನಸಂಗಮನಾಥನಲ್ಲಿ ಲಕ್ಷಣವನ್ನು ಅರಸಲಾಗದು' ಎಂದು ಮುನ್ನಿನ ಪ್ರಾಕೃತಶೈವರು ಲಿಂಗದಲ್ಲಿ ಅರಸುತ್ತಿದ್ದ ಗೋಳಕ-ಗೋಮುಖಿ-ಕಟಿ-ವರ್ತುಲ-ಪೀಠ ವೆಂಬ ಐದು ಪಾಷಾಣ ಶಿಲ್ಪಲಕ್ಷಣಗಳನ್ನು ಶೈವಸಂಕಲ್ಪವಿಡಿದು ಲಿಂಗಾಂಗಿಗಳು ನೋಡಬಾರದೆಂದು ಚೆನ್ನಬಸವರ ನೆವದಲ್ಲಿ ಬಸವರು ಬೋಧಿಸಿದ್ದುಂಟು. ಬಸವರ ಹಸ್ತಪರುಷವೇಧೆಗೊಂಡು ಹಿಂದಕ್ಕೆ ಬಂದ ತಮ್ಮಿಷ್ಟಲಿಂಗವನ್ನು ಪಡೆಯುತ್ತ ಚೆನ್ನಬಸವರು ತಮಗೆ ಬಸವಗುರುವಿನ ಪರೋಕ್ಷಾನುಗ್ರಹವು ಹಸ್ತಸ್ಪರ್ಶ ಲಿಂಗಾಯತ್ತದಿಂದ ಸಹಜವಾಗಿ ಉಂಟಾಯಿತೆಂದು ಬಸವರನ್ನೊಳಗೊಂಡು ಸಕಲ ಶಿವಶರಣರನ್ನು ಬೆರಗುಗೊಳಿಸಿದ್ದುಂಟು. ಮೆಲ್ಲಮೆಲ್ಲನೆ ಭಕ್ತಾದಿ ಐಕ್ಯಾಂತ ಆರು ಸ್ಥಲಗಳನ್ನು ಸಾಧಿಸುವೆನೆಂಬ ಬಸವವಚನವನ್ನು ಕುರಿತು 'ದಂಡಿನಲ್ಲಿ ಸೋದರಮಾವನೆ?' ಎಂಬ ಲೋಕನ್ಯಾಯವಿಡಿದು ನಿಂದ ಸ್ಥಲದಲ್ಲಿಯೆ ನಿಜಸ್ಥಲವನ್ನು ಸಾಧಿಸುವುದೆಂದು ಚೆನ್ನಬಸವರು ಬಸವರಿಗೂ ಬೋಧೆಗೈದದ್ದುಂಟು. ಇಂತು ಬಸವರು ತಮ್ಮ ಹುಸಿ ಮಾತಿನಿಂದ ಚೆನ್ನಬಸವರ ಮಹಾಜ್ಞಾನವನ್ನು ಅನಾವರಣಗೈದದ್ದುಂಟು. ಮಧುವಯ್ಯ-ಹರಳಯ್ಯರ ವಿವಾಹಬಾಂಧವ್ಯನೆವದಲ್ಲಿ ಉಂಟಾದ ನಾನಾ ವಿಚಿತ್ರಸಂಕಟಗಳಿಂದಾಗಿ ಚಾಳುಕ್ಯ ಕಳಚೂರ್ಯ ಸಂಘರ್ಷಗಳಿಂದಾಗಿ ಬಿಜ್ಜಳದೇವರನ್ನು ತೊರೆದು ಬಸವರು ಕಲ್ಯಾಣ ತ್ಯಜಿಸಿ ಹೊರಟಾಗ ಬಿಜ್ಜಳದೇವರ ಪ್ರಾರ್ಥನೆಯಂತೆ ಚೆನ್ನಬಸವರು ದಂಡಾಧೀಶಪದವಿಯನ್ನೂ ಸ್ವೀಕರಿಸಿದ್ದುಂಟು. ಕಲ್ಯಾಣಸಂಘರ್ಷ ವಿಸ್ಫೋಟಗೊಂಡು ಬಿಜ್ಜಳದೇವರು ಚಾಳುಕ್ಯವಿಧೇಯರಿಂದ ಹತರಾಗಿ ಹೋಗಿ ಆ ಹತ್ಯೆಯ ದೂರನ್ನು ಶಿವಶರಣರು ನಿಮಿತ್ತವಿಲ್ಲದೆ ಹೊರಬೇಕಾಗಿ ಬಂದಾಗ ಚೆನ್ನಬಸವರು ಶಿಕ್ಷಾಶೀಲ ಶೂನ್ಯಸಿಂಹಾಸನಾಧಿಕಾರವನ್ನು ಗಾಣಿಗ ಶೂದ್ರಕುಲದವರಾಗಿ ಜನಿಸಿಯೂ ಪೂರ್ವಗುರು ತೆಲ್ಲಿಗ ರೇವಣಸಿದ್ಧರ ನಾಥಶೈವವನ್ನೂ ದಾಟಿ ಲಿಂಗಾಂಗಿಗಳಾಗಿ

ಮಹತ್ಸಾಧನೆಗಳನ್ನು ಗೈದ ಮಹಾನುಭಾವಿ ಸೊನ್ನಲಿಗೆಯ ಶಿವಯೋಗಿ ಮಹಾವೃದ್ಧ ಸಿದ್ಧರಾಮಯ್ಯಗಳಿಗೆ ಒಪ್ಪಿಸಿ, ಶರಣರ ಜೀವಧರ್ಮಗಳ ಸಂರಕ್ಷಣೆಗಾಗಿ ಉಳಿವಿಗಾಗಿ ಕಲ್ಯಾಣವನ್ನು ತೊರೆದು ಹೊರಟ ಶಿವಶರಣರ ಮುಂದಾಳಾಗಿ ದುರ್ಗಮವಾದ ವನಾಂತರವನ್ನು ಅತಿಕ್ರಮಿಸಿ ನಿರಪಾಯವಾದ ನೈಸರ್ಗಿಕ ವಿಪುಲ ಆಹಾರ-ಸಂರಕ್ಷಣೆಗಳುಳ್ಳ ಉಳುವೆಯ ಮಹಾರಣ್ಯದ ಮಹಾಗವಿಗಳಿಗೆ ತೆರಳಿ ಅಲ್ಲಿಯೇ ನೈಸರ್ಗಿಕವಾದ ಸಹಜನಿವೃತ್ತಿಯನ್ನು ಪಡೆದು ಮಹಾಬಯಲಿನಲ್ಲಿ ಬಯಲಾಗಿ ಲೀಲಾವಿಶ್ರಾಂತಿಗೊಂಡರು.

॥ ಜಯಜಯ ಬಸವೇಶ ಹರಹರ ಮಹಾದೇವ ॥

## ಶ್ರೀ ಚೆನ್ನಬಸವೇಶ್ವರದೇವಸ್ತೋತ್ರವಚನಪಂಚಕ

೧

ತಾನೆಂದೆನಲೊಲ್ಲದೆ ಗುರುವೆಂದು ಹಿಡಿದವನ
ಗುರುವೆಂದಲ್ಲಿ ನೀನೆಂದು ನಡೆದವನ
ನೀನೆಂದಲ್ಲಿಯೆ ಲಿಂಗಜಂಗಮದ ಸಕೀಲಸಂಬಂಧವ ನೆಲೆಗೊಳಿಸಿದವನ
ಲಿಂಗಜಂಗಮದಲ್ಲಿ ತನ್ನ ಮರ್ಮದ ಕರ್ಗಿಗೊಂಡ ಲಿಂಗೈಕ್ಯನ
ಗೊಹೇಶ್ವರಲಿಂಗದಲ್ಲಿ
ಚೆನ್ನಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು
- ನಿಜನಿರ್ವಾಣಿ ಗುಹಲ್ಲಮಪ್ರಭುದೇವರು (ಚೆಬಸ್ತೋವ ೧೦)

ಚೆನ್ನಬಸವರಾಜದೇವರೆನ್ನ ಶಿಷ್ಯನಾದನೆಂದಡೆ
ಎನಗಾದ ಘನವೇನಯ್ಯ ?
ಆದಿಯ ತೋರಿದ ಚೆನ್ನಬಸವನು
ಅನಾದಿಯ ತೋರಿದ ಚೆನ್ನಬಸವನು
ಕೂಡಲಸಂಗಮದೇವ !
ಚೆನ್ನಬಸವರಾಜದೇವರೆನ್ನ ಮಾತಾಪಿತರಯ್ಯ !

- ಆದಿಪ್ರಮಥ ಅನಾದಿಸದ್ಭಕ್ತ ಶ್ರೀಗುರುಬಸವೇಶ್ವರದೇವರು (ಚೆಬಸ್ತೋತ್ರ ೪೦)

ಅಂಗವಿಸನನ್ಯಕ್ಕೆ | ಹಿಂಗಿಹ ಮಾಯಕ್ಕೆ
ಸಂದ ಸುಖವೇ ಶಿವನ | ಅಂಘ್ರಿಗಾಗಿ ||
ಮಂಗಳ ಉರುತರ ಬೆಳಗು | ಪ್ರಕಾಶಿಸುವ
ನಿಸ್ಸಂಗಗುರುವು ಚೆನ್ನ|ಬಸವಣ್ಣನು ||
ಕಪಿಲಸಿದ್ಧಮಲ್ಲಿಕಾರ್ಜುನ !

- ಮಹಾವೃದ್ಧ ಶಿವಯೋಗಿ ಸೊನ್ನಲಿಗೆಯ ಸಿದ್ಧರಾಮೇಶ್ವರದೇವರು (ಚೆಬಸ್ತೋತ್ರ ೭೫)

ಮರ್ತ್ಯಲೋಕದ ಭಕ್ತರ ಮನವ ಬೆಳಗಲೆಂದು ಇಳಿತಂದನಯ್ಯ ಶಿವನು
ಕತ್ತಲೆಯ ಪಾಳೆಯವ ರವಿ ಹೊಕ್ಕಂತಾಯಿತ್ತಯ್ಯ
ಚಿತ್ತದ ಪ್ರಕೃತಿಯ ಹಿಂಗಿಸಿ

ಮುಕ್ತಿಯ ಪಥವ ತೋರಿದನೆಲ್ಲ ಅಸಂಖ್ಯಾತಗಣಂಗಳಿಗೆ
ತನುವೆಲ್ಲ ಸ್ವಯಲಿಂಗ ; ಮನವೆಲ್ಲ ಚರಲಿಂಗ
ಭಾವವೆಲ್ಲ ಮಹಾಘನದ ಬೆಳಗು
ಚೆನ್ನಮಲ್ಲಿಕಾರ್ಜುನಯ್ಯ !
ನಿಮ್ಮ ಶರಣಸಮ್ಯಜ್ಞಾನಿ ಚೆನ್ನಬಸವಣ್ಣನ ಶ್ರೀಪಾದಕ್ಕೆ ಶರಣೆಂದು
ಎನ್ನ ಭವಂ ನಾಸ್ತಿಯಾಯಿತ್ತಯ್ಯ ಪ್ರಭುವೆ !

-ಕೇಶಾಂಬರ ಕಂಬಳಿಯ ಉಡುತಡಿಯಕ್ಕ ಮಹಾದೇವಿಗಳು (ಷಸ್ತ್ರೋವ ಎ ೫-೪)

ಅಂಗವೆ ಲಿಂಗವಾಗಿ , ಲಿಂಗವೆ ಪ್ರಾಣವಾಗಿ
ಜಂಗಮವೆ ಸಂಗವಾಗಿ , ಸಂಗವೆ ಸುಸಂಗವಾಗಿ
ಪ್ರಾಣವೆ ಪ್ರಸಾದವಾಗಿ , ಪ್ರಸಾದವೆ ಪ್ರಾಣವಾಗಿ
ಇಂತೀ ತ್ರಿವಿಧದಲ್ಲಿ ಸಂಪನ್ನನಾದ
ಸಮತಾಪ್ರಸಾದಿ ! ಸನ್ನಹಿತಪ್ರಸಾದಿ ! ಸಮಾಧಾನಪ್ರಸಾದಿ !
ಕಲಿದೇವಯ್ಯ ! ಚೆನ್ನಬಸವಣ್ಣನ ಪ್ರಸಾದವ ಕೊಂಡು
ನಾನು ಬದುಕಿದೆನು ಕಾಣಾ ಪ್ರಭುವೆ !

-ಮಹಾಮಾಹೇಶ್ವರ ಮಡಿವ ಆಳ್ ಮಾಚಯ್ಯದೇವರು (ಷಸ್ತ್ರೋವ ಎ ೫-೮)

## ಬಸವವಚನಧರ್ಮಪ್ರಶಸ್ತಿ

ಬಸವಬೋಧೆಯಸರ್ಣಿಯು ಹಸನಸತ್ಕ ತ್ರಿವಿಧತನು
ಬಸವಗತಿ ತ್ರೈಶುದ್ಧ ಪ್ರಸಿದ್ಧ ಸಿದ್ಧ
ಬಸವ 'ನಡೆ-ನುಡಿ-ನೋಟ', ಅಸಮತ್ರೈವಿಧದೀಕ್ಷೆ
ಬಸವಾದಿಪ್ರಮಥರಿಗೆ ತ್ರಿವಿಧಶರಣು

ಆರ್ಯಶೈವದ ಧರ್ಮ ವೀರಬೋಧೆಯನೊರೆದು
ಸಾರಿದರು ಗುರುಬಸವ ನಿಜತತ್ತ್ವವ
ಅರಿಗಾವರು ಸುಲಭ ತಾರಿಪುದು ಜಗವನ್ನೆ
ಮಾರಹರನಪ್ಪಂಥ ಸುಖಶೀಲವು

ಸಾರಸುಧೆ ಸಾರಿರಲು ನೂರ್ಯು ಶಾಸ್ತ್ರಗಳೇಕೆ
ಮೇರುಮಣಿ ಶಿವಶರಣವಚನಾಗಮ
ಮೇರುಗಿರಿ, ಸುರಧೇನು, ಸಾರಚಿಂತಾಮಣಿಯು
ಕೋರಿದುದ ಕೊಡುವಂಥ ಕಲ್ಪತರುವು

ಶೈವದಾನೆಗೆ ಸಿಂಹ ಶೈವಾಭ್ರ ಬಿರುಗಾಳಿ
ಶೈವಬೆಟ್ಟಕೆ ಉಳಿಯು ಬಸವಬೋಧೆ
ಶೈವಹತ್ತ್ರನೆ ಧರ್ಮ ಶೈವಕ್ಕೆ ಭಿನ್ನವೆ
ಶೈವವದು ತಾನಲ್ಲ ಪರಮಶುಚಿಯು

-ಸಂಪಾದನೆಯ ಗಿರಿರಾಜದೇವರು

|| ಶ್ರೀಗುರುಬಸವಲಿಂಗಾಯ ನಮಃ ||

ಸಂಪಾದನೆಯ ಗಿರಿರಾಜದೇವರು ಆಯ್ದು ಸೇರಿಸಿದ ನಿರ್ವಚಿಸಿದ

ಅವಿರಳಜ್ಞಾನಿ ಷಟ್‌ಸ್ಥಲಚಕ್ರವರ್ತಿ

# *ಚೆನ್ನಬಸವೇಶ್ವರದೇವರ (೩೦) ವಚನಗಳು*

## || ೧ ನಿಜದ ಅರಿವು ಸಂಪಾದನೆಯ ಸ್ಥಲ ||

### || ನಿಜಗುರು ಆದಿಪ್ರಮಥ ಶ್ರೀಬಸವೇಶ್ವರದೇವಸ್ತೋತ್ರ ||

*೧. ಲಿಂಗದ ಪೂರ್ವಾಶ್ರಯವ ಕಳದು ಇದು ಪ್ರಾಣಲಿಂಗವೆಂದು*
*ತೋರ್ರಬಂದನಯ್ಯ ಬಸವಣ್ಣನು !*
*ಲಾಂಛನದ ಪೂರ್ವಾಶ್ರಯವ ಕಳದು ಇದು ಲಿಂಗಜಂಗಮವೆಂದು*
*ತೋರ್ರ ಬಂದನಯ್ಯ ಬಸವಣ್ಣನು !*
*[ಪ್ರಸಾದದ ಪೂರ್ವಾಶ್ರಯವ ಕಳದು ಇದು ಮಹಾ]ಪ್ರಸಾದವೆಂದು*
*ಸಯವ ಮಾಡಿ ತೋರ್ರ ಬಂದನಯ್ಯ ಬಸವಣ್ಣನು !*
*ಲಿಂಗ-ಜಂಗಮ-ಪ್ರಸಾದದ ಪೂರ್ವಾಶ್ರಯವ ಕಳೆಯಲೆಂದು*
*ಮರ್ತ್ಯಕ್ಕೆ ಜನಯಿಸಿದನಯ್ಯ*
*ಕೂಡಲ ಚೆನ್ನಸಂಗನಲ್ಲಿ ಬಸವಣ್ಣನು !* ||೧-೧||

ಹಳೆಯ ಹದಿನಾರು ಶೈವಗಳಲ್ಲಿನ ಗುಡಿಲಿಂಗಗಳನ್ನು ಒಲ್ಲದೆ ಇಷ್ಟಲಿಂಗವನ್ನು ಅರುಹಿನ ಕುರುಹಾಗಿ ಬಯಲು, ಅರಿವು, ಭಾವ, ಮನ, ನೋಟ, ಕೈಗಳಿಗೆ ಇಳುಹಿಕೊಟ್ಟ, ಆದಿಪ್ರಮಥರು ಶ್ರೀಗುರು ಬಸವೇಶ್ವರದೇವರೆ ! ಜಡಪ್ರಾಣಿಯೆನ್ನಿಸಿದ ನರನಿಗೆ ಅರುಹು ಕುರುಹುಗಳನ್ನು ಕೊಟ್ಟು ಹರಜಂಗಮಮೂರ್ತಿಯೆನ್ನಿಸಿದವರು ಶ್ರೀಗುರುಬಸವರೆ ! ಒಡಲವಿಡಿದು ಪಾಷಾಣಕ್ಕೆ ತೋರಿ ಪ್ರಸಾದವೆಂದೆನ್ನದೆ ಲಿಂಗಮುಖಿಜಂಗಮವೆಂದು ಜಂಗಮವು ಒಪ್ಪುಮಿಕ್ಕುದೆ ಮಹಾಪ್ರಸಾದವೆಂದು ತಿಳಿಹಿಕೊಟ್ಟವರು ಶ್ರೀಗುರುಬಸವರೆ ಗುರುಲಿಂಗಜಂಗಮಪ್ರಸಾದವೆಂಬ ನಾಲ್ಕು ಬಗೆಯ ಸಾರ ಆಯುಗಳನ್ನು ಪೊಟ್ಟು, ಪೊಡಲಿಗೆ ಕಂಡು ಉಂಡು ಪ್ರಸಾದರೂಪವಾಗಿ ಕರುಣಿಸಿದವರು ಶ್ರೀಗುರುಬಸವರೆ. ಇಂತು ಪೇಪದೇಟಿಕ ಅನಾದಿಸದ್ಭಕ್ತನೆಂದೆನ್ನಿಸಿದ ಪ್ರಥಮ ಪ್ರಮಥಾಚಾರ್ಯರು ಶ್ರೀಗುರುಬಸವರೆ !

|| ಸರ್ವಾಶ್ರಯಸದ್ಭಕ್ತಪ್ರಶಸ್ತಿ ||

೨. ತನುವಿಲ್ಲದ ಭಕ್ತ ; ಮನವಿಲ್ಲದ ಭಕ್ತ ; ಧನವಿಲ್ಲದ ಭಕ್ತ
ಪಂಚೇಂದ್ರಿಯ ಸುಖವಿಲ್ಲದ ಭಕ್ತ
ಕಾಲವಿಲ್ಲದ ಭಕ್ತ ; ಕರ್ಮವಿಲ್ಲದ ಭಕ್ತ
ಕಲ್ಪಿತವೆಂಬುದನರಿಯದ ಭಕ್ತ
ಆಶನವನರಿಯದ ಭಕ್ತ ; ವ್ಯಸನವನರಿಯದ ಭಕ್ತ
ಹುಸಿ,ಮುಸುಕು, ಅರಿಷಡ್ವರ್ಗಂಗಳನರಿಯದಿಹ ಭಕ್ತ
ಲಿಂಗಕ್ಕೆ ಆಧಾರ ಭಕ್ತ , ಜಂಗಮಕ್ಕೆ ಆಧಾರ ಭಕ್ತ
ಪ್ರಸಾದಕ್ಕೆ ಆಧಾರ ಭಕ್ತ !
ಕೂಡಲ ಚೆನ್ನಸಂಗಯ್ಯನಲ್ಲಿ
ಎನ್ನ ಮಾತಾಪಿತರ್ನೀ ಸದ್ಭಕ್ತ ! ||೧-೨||

ಅವಿಪ್ರಮಥ ಶ್ರೀಗುರುಬಸವರು ಕಂಡು ಉಂಡು ಕರುಣಿಸಿದ ನಿಜದ ಅರಿವು-ಆಚಾರ-ಅನುಭಾವಗಳ ಬಗೆಗೆ ನಂಬಿಕೆಯ ಇಂಬುಳ್ಳ ಲಿಂಗಾಂಗಿಭಕ್ತನೆಂದೆನ್ನಿಸುವರೆ ತನುವಿನ ವಿಷಯ, ಮನದ ಸಂಕಲ್ಪವಿಕಲ್ಪ, ಅರ್ಥವ್ಯಾಭಿಮಾನಧನದ ಸಂಚಲತೆ, ಐದು ಕರ್ಮೇಂದ್ರಿಯ-ಐದು ಜ್ಞಾನೇಂದ್ರಿಯಗಳಲ್ಲಿನ ದುರಾಚಾರ-ದುರ್ವಿಚಾರ , ಕಾಲದ ಹುಟ್ಟು-ಹೊಂದುಗಳು , ಕಲ್ಪಿತ ಭ್ರಾಂತಿ-ಭ್ರಮೆಗಳು ಹಗಲಿನ ಒಡಲ ಸಡಗರ , ಇರುಳಿನ ವಿಷಯದ ವ್ಯಸನ ಸಟೆ, ಬಾರಿಕೆಹಾರಿಕೆ, ಕಾಮ,ಕ್ರೋಧ,ಲೋಭ , ಮೋಹ, ಮದ, ಮಾತ್ಸರ್ಯಗಳ ದುರ್ವ್ಯಸನಗಳು ಹರೆ ಹಿಂಗಿರಬೇಕು , ಅರುಹುಕುರುಹುಗಳನ್ನು ಆಧಾರಾಶ್ರಯವಾಗಿ ಧಾರಣಗೈದಿರಬೇಕು , ಅನಾದಿಜಂಗಮದ ಶಿಕ್ಷಾಶೀಲಕ್ಕೆ ವರವಿಧೇಯನಾಗಿರಬೇಕು ಪ್ರಸನ್ನತಾ ಪ್ರಸಾದದ ನೆಲೆಕಲೆಗಳನ್ನು ಸದಾ ಧಾರಣಗೈಯುತ್ತಿರಬೇಕು ಧರ್ಮಬೀಜರೂಪಿ ತಂದೆಯೂ ಧರ್ಮಕ್ಷೇತ್ರರೂಪಿ ತಾಯಿಯೂ ತಾನೆ ಆಗಿರಬೇಕು.

**|| ಜ್ಞಾನಾವತರಣಕುಳಸ್ಥಳನಿರ್ದೇಶ ||**

*೩. ಮೊದಲಲ್ಲಿ ಮೊದಲಲ್ಲಿ ಅಚ್ಚೊತ್ತಿದ ಕಾರಣ*
*ಎಚ್ಚರಿಕೆಯಾಯಿತ್ತು*
*ಗುರುಕಾರುಣ್ಯದಿಂದ ಅರಿವಾಯಿತ್ತು, ಆಚಾರವಾಯಿತ್ತು*
*ಜಂಗಮದಿಂದ ತಿಳಿದ ತಿಳಿವಿನಲ್ಲಿ ಪ್ರಸಾದ ಸಾಧ್ಯವಾಯಿತ್ತು*
*ಕೂಡಲಚೆನ್ನಸಂಗಯ್ಯನಲ್ಲಿ ಏಕಾರ್ಥವಾಯಿತ್ತು* ||೧-೩||

ಮನದ ಎಚ್ಚರಿಕೆಯಿಂದ ಮೋಹ ತೊಲಗಿ ವಿವೇಕ ಎದ್ದು ತಾನು ಯಾರು? ತನ್ನ ನೆಲೆಕಲೆಸೋಲುವೇನು? ಎಂಬ ಸ್ವಾತ್ಮವಿಮರ್ಶೆಯುಂಟಾಗಿ ಸಂಸಾರಹೇಯಭಾವವೂ ಮಾಯಾಮರವೆಯ ನಿರಸನವೂ ಉಂಟಾಗಿ ಸದ್ಗುರುವಿನ ಕಾರುಣ್ಯಕ್ಕೆ ಪಾತ್ರನಾಗಿ ನಿಜದ ಅರುಹೂ ಆ ಅರುಹಿನ ಕುರುಹೂ ದೊರಕೊಂಡವು. ಕುರುಹುಗೊಂಡ ಈ ಲಿಂಗಾಂಗಿಗೆ ಪೂರ್ವಾತ್ ಪೂರ್ವಗಳಲ್ಲಿ ಅರುಹೂ, ಗುರುಕಾರುಣ್ಯಾಪೇಕ್ಷೆಯೂ, ಮಾಯಾನಿರಸನವೂ, ಸಂಸಾರಹೇಯತೆಯೂ, ವಿವೇಕಜಾಗೃತಿಯೂ [illegible] ಪತಿತರಯಗೊಂಡು ಅರುಹುಕುರುಹುಗಳಳ, ನಿಜಲಿಂಗಾಂಗಿರೂಪಿ ಜಂಗಮವು

ಲಿಂಗಾಂಗಿಸ್ವಕ್ಷೇತ್ರದಲ್ಲಿ ಆಕರ್ಷಿತವಾಗಿ ಬಂದು ಜನಪದಪ್ರಸ್ಥಿತರಾದ ಮಹಾಪ್ರಸಾದವೆ ಆ ಲಿಂಗಾಂಗಿಗೆ ಅಲ್ಪಶ್ರಮ ಬಹುಫಲವಾಗಿ ಸುವಿಶೀಲದಲ್ಲಿ ದೊರಕೊಂಡವು ! ಈ ಮೂಲಕ ಲಿಂಗಾಂಗಸಾಮರಸ್ಯವೇ ಶುದ್ಧಸಿದ್ಧಪ್ರಸಿದ್ಧವಾಗಿ ಸುಲಭ್ಯವಾಯಿತು

**|| ಗುರುಶಿಷ್ಯತಾರತಮ್ಯನಿರಸನ ||**

*೪. ಶ್ರೀಗುರುಲಿಂಗವು ! ಶಿಷ್ಯನ ಬರವಕಂಡು*
*ಬಂದು ಪಾದದ ಮೇಲೆ ಬೀಳುವಾತ ಗುರುಲಿಂಗ !*
*ಮಂಡೆಯ ಹಿಡಿದೆತ್ತುವಾತ ಶಿಷ್ಯ !*
*ಶ್ರೀ ಗುರುಲಿಂಗವು ! ಶಿಷ್ಯನ ಸಿಂಹಾಸನದಲ್ಲಿ ಕುಳ್ಳಿರಿಸಿ*
*ಪಾದಾರ್ಚನೆಯ ಮಾಡುವಾತ ಗುರುಲಿಂಗ !*
*ಮಾಡಿಸಿಕೊಂಬಾತ ಶಿಷ್ಯ !*
*ಶ್ರೀಗುರುಲಿಂಗವು ! ಶಿಷ್ಯನಾರೋಗಣೆಯ ಮಾಡುತ್ತಿದ್ದಾನೆಂದು*
*ಬಂದು ಪ್ರಸಾದವ ಕೊಂಬಾತ ಗುರುಲಿಂಗ !*
*ಇಕ್ಕುವಾತ ಶಿಷ್ಯ !*
*ಇದು ಕಾರಣ, ದ್ವಿವಿಧ ಸಂಚ ಸನುಮತವಾಯಿತ್ತು !*
*ಕೂಡಲ ಚೆನ್ನಸಂಗ ನಿಮ್ಮ ಶರಣಂಗೆ* ||೧-೪||

ಅರುಹ ಕರುಗೊಂಡಿರುವ ಗುರುಮೂರ್ತಿಯೇ ತಾನಾಗಿದ್ದರೂ ತನ್ನ ಶ್ರೀಮಠಕ್ಕೆ ಬಂದ ಶಿಷ್ಯಲಿಂಗಾಂಗಿಯನ್ನು ಕಾಣುತ್ತಲೆ ನನ್ನಿಂದ ಅರುಹುಕುರುಹುಗಳನ್ನು ಹೊಂದಿದ ಈತನು ಶಿಷ್ಯನೆಂದು ಬಿಳಿ ಬೆರೆಯದ ಅಂಗದ ಮೇಲೆ ಲಿಂಗವುಳ್ಳ ಈತನೀಗ ಸಂಗಮಯೋಗ್ಯನೆನ್ನಿಸಿದ ಜಂಗಮಮೂರ್ತಿಯೆ ಸರಿಯೆಂದು ತಿಳಿದು ಕಾಣುತ್ತಲೆ ಎದುರುಗೊಂಡು ಅವನ ಸುಜ್ಞಾನಸತ್ಕ್ರಿಯೆಗಳೆಂಬ ಮಂತ್ರಚರಣಗಳನ್ನು ಪ್ರೀತ್ಯಾದರಾಭಿಮಾನದಿಂದ ಮನ್ನಿಸಿಗೈದು ಹತ್ತುವಿಧದ ನಿಜಪಾದೋದಕಗಳನ್ನು ಪಡೆದು. ಆತನು

ಒಪ್ಪ ಮಿಕ್ಕ ಶಿಕ್ಷಾಶೀಲವೆನ್ನಿಸಿದ ಹನ್ನೊಂದುವಿಧದ ಪ್ರಸನ್ನತೆಗಳೆಂಬ ನಿಜಪ್ರಸಾದಗಳನ್ನು ಶ್ರದ್ಧೆಯಿಂದ ತಾನೂ ಕಂಡು ಉಂಡು ಕೃತಕೃತ್ಯನಾಗುವುದು. ಇಂತು ವಿಕಲ್ಪಾಜನವಿಡಿದು ಭಿನ್ನಭಾವವಳಿದು ಸಕಲಲಿಂಗಾಂಗಿಗಳನ್ನು ಶಿವಮೂರ್ತಿಗಳೆಂದೆ ನೆರೆ ನಂಬಿ ಒಲೈಸುವುದೆ ದೀಕ್ಷಾಕರ್ತೃಗುರುಸ್ವಾಮಿಗಾದರೂ

|| ಚತುರ್ವಿಧಸಾರಾಯನಿರ್ದೇಶ ||

*೫. ಶಿಲೆಯೆಂಬ ಪೂರ್ವಾಶ್ರಯವ ಕಳೆದು ಲಿಂಗವೆಂದ*
*ನರನೆಂಬ ಪೂರ್ವಾಶ್ರಯವ ಕಳೆದು ಗುರುವೆಂದ*
*ಜಾತಿಸೂತಕದ ಪೂರ್ವಾಶ್ರಯವ ಕಳೆದು ಜಂಗಮವೆಂದ*
*ಎಂಜಲೆಂಬ ಪೂರ್ವಾಶ್ರಯವ ಕಳೆದು ಪ್ರಸಾದವೆಂದ*
*ಇಂತೀ ಚತುರ್ವಿಧ ಪೂರ್ವಾಶ್ರಯವ ಕಳೆಯ ಬಲ್ಲನಾಗಿ*
*ಕೂಡಲ ಚೆನ್ನಸಂಗಯ್ಯನಲ್ಲಿ ಶರಣಸ್ವತಂತ್ರ* ||೧-೫||

ಸದ್ಗುರುವನ್ನು ತನ್ನಂತೆಯೆ ಇರುವ ಅಂಗಾಂಗಗಳುಳ್ಳ, ಸಾಧಾರಣ ಜನನರನೆಂದೆನ್ನದೆ ಜ್ಞಾನಮೂರ್ತಿಯೆಂದರಿದು ಶ್ರದ್ಧೆಯಿಂದ ಒಲೈಸಿ ಅರುಹುಕುರುಹುಗಳನ್ನು ಪಡೆಯುವುದು ಅರುಹಿನ ಕುರುಹಾದ ನಿಜೇಷ್ಟಚಿಲ್ಲಿಂಗವನ್ನು ಮಿಕ್ಕಿನ ಗುಡಿಗುಂಡಾರಗಳಲ್ಲಿನ ಪಾಮರರಿಗಾದ ಸ್ಥಾವರ ಶಿಲೆಲಿಂಗವೆಂದು ತಿಳಿಯದೆ ಪ್ರಾಣಲಿಂಗವೆಂದೆ ನೆರೆನಂಬಿ ಸುಜ್ಞಾನ-ಸದ್ಭಾವ-ಸುಮನ- ಸುದರ್ಶನಗಳಿಂದ ಸುಗ್ರಹಣಕ್ಕಾಗಿ ಕರಸ್ಥಲಕ್ಕಿಳಿದ ಅರುಹಿನ ಕುರುಹೆಂದೆ ಹಿಡಿದು ನೋಡಿ ನುಡಿಸಿ ಮನನಗೈದು ಭಾವಿಸಿ ಅರಿತು, ಬಯಲು-ಜ್ಞಾನ-ಭಾವ-ಮನ-ನೇತ್ರ-ಕರವೆಂಬ ಷಟ್ಸ್ಥಲಗಳಿಗೆ ಅನುಕ್ರಮವಾಗಿ ಬಿಜಯಂಗೈಸಿ ಕುರುಹಾಗಿ ಸದಾ ಅಂಗದ ಮೇಲೆ ಸಂಗಸಾಮರಸ್ಯಗೊಳ್ಳಬೇಕು ಅಂಗದ ಮೇಲೆ ಲಿಂಗವನ್ನುಳ್ಳ ಲಿಂಗಾಂಗಿಯನ್ನು ಸಂಗಮಯೋಗ್ಯನಾದ ಅನಾದಜಂಗಮಮೂರ್ತಿಯೆಂದು ನೆರೆನಂಬಿ ಒಲೈಸುವುದಲ್ಲದೆ ಆ ಅಜಾತನಗೊಂದು ಕುಜಾತಿಸುಜಾತಿಯನ್ನು ಕಲ್ಪಿಸಿ ಮೇಲರಿಮೆ ಕೀಳರಿಮೆಗಳಿಂದ ಒಲೈಸಲಾಗದು. ಬೀಳುಗೈಯಲಾಗದು ಆ ಜಂಗಮದಿಂದ ದತ್ತವಾದ ಶಿಕ್ಷಾಶೀಲವೆಂಬ ಸುಪ್ರಸಾದಶಿಕ್ಷೆಯನ್ನು ಶ್ರದ್ಧೆ-

ನಿಷ್ಠೆ-ಅವಧಾನ-ಅನುಭಾವ ಚತುರ ಚತುರ್ಮುಖಿಗಳಲ್ಲಿ ಕಂಡು ಉಂಡು ಕೃತಾರ್ಥನಾಗಬೇಕಲ್ಲದೆ ಅವನ ಆ ಎಂಟಲೆಂದು ಹೀಗಳೆದು ತೊರೆಯಲಾಗದು ಇಂತು ನಾಲ್ಕು ಸಾರಗಳನ್ನು ನೆಲೆಕಲೆಯರಿತು ಒಲೈಸಬಲ್ಲವನೆ ಸತ್ಯಶರಣನು ।

|| ಭಕ್ತಜಂಗಮಪ್ರಸಾದಪರಿಣಾಮೈಕ್ಯನಿರ್ದೇಶ ||

೬. *ಅರಿವವರತು ಮರಹು ನಷ್ಟವಾದರೆ ಭಕ್ತ*
*ಆಚಾರವರತು ಅನಾಚಾರ ನಷ್ಟವಾದರೆ ಜಂಗಮ*
*ಅರ್ಪಿತವರತು ಅನರ್ಪಿತ ನಷ್ಟವಾದರೆ ಪ್ರಸಾದ*
*ಪ್ರಸಾದವರತು ಪದಾರ್ಥನಷ್ಟವಾದರೆ ಪರಿಣಾಮಿ*
*ಪರಿಣಾಮವರತು ಪರಮಸುಖ ನೆಲೆಗೊಂಡರೆ*
*ಕೂಡಲ ಚೆನ್ನಸಂಗಯ್ಯನಲ್ಲಿ ಲಿಂಗೈಕ್ಯವು* //೧೬//

ಭಕ್ತನಾದರೆ ಅರಿವ ದಾಟಿ ಜ್ಞಾನಶೂನ್ಯನಾಗಿ ಮರಹನ್ನು ಮರೆದಿರಬೇಕು ಜಂಗಮನಾದರೆ ಆಚಾರವನ್ನು ದಾಟಿ ಕ್ರಿಯಾವಿಶ್ರಾಂತಿಗೊಂಡು ದುಷ್ಕ್ರಿಯೆ ಹಿಂಗಿರಬೇಕು ಪ್ರಸಾದವಾದಲ್ಲಿ ಅರ್ಪಣವನ್ನು ದಾಟಿ ಅನರ್ಪಿತವು ನಷ್ಟಗೊಂಡಿರಬೇಕು. ಪರಿಣಾಮಗೊಂಡಲ್ಲಿ ಪ್ರಸಾದವನ್ನು ದಾಟಿ ಪದಾರ್ಥವನ್ನು ಹಿಂಗಿರಬೇಕು ಲಿಂಗೈಕ್ಯಗೊಂಡಲ್ಲಿ ಪರಿಣಾಮ ಪ್ರಸನ್ನತೆಯ ದಾಟಿ ಮಹಾಸುಖದಲ್ಲಿ ಬಯಲಾಗಿರಬೇಕು

## || ೨ ನಿಜದಾಚಾರ ಸಂಪಾದನೆಯ ಸ್ಥಲ ||

### || ತಾಮಸಕೃತವ್ಯರ್ಥಲಿಂಗಧಾರಣ ||

*೭. ಮಡಿಲಲ್ಲಿ ಸುತ್ತಿದ ಹಾವಿನಂತೆ ಮಡಿಲಲ್ಲಿ ಕಟ್ಟಿದಡೇನು ?*
*ಕೊರಳಲ್ಲಿ ಸುತ್ತಿದ ಹಾವಿನಂತೆ ಕೊರಳಲ್ಲಿ ಕಟ್ಟಿದಡೇನು ?*
*ಕಳವು, ಹಾದರ, ಭವಿಯ ಸಂಗ, ಅನ್ಯದೈವವ ಬಿಡದನ್ನಕ್ಕ*
*ಲಿಂಗಭಕ್ತನೆನಿಸಲು ಬಾರದಯ್ಯ*
*ಅನಾಚಾರದಿಂ ನರಕ ; ಆಚಾರದಿಂ ಸ್ವರ್ಗ*
*ಕೂಡಲ ಚೆನ್ನಸಂಗಯ್ಯನೊಲ್ಲ ಭೂಮಿಭಾರಕರ* ||೨-೧||

ಕಳವು, ಹಾದರ, ಭವಿಸಂಗ, ಅನ್ಯದೈವಗಳನ್ನು ಬಿಡದ ಅನಾಚಾರಿಯು ಮಡಿಲಲ್ಲಿ ಕಟ್ಟಿದ ಲಿಂಗವು ಮಡಿಲ ಸಂಜುಳ್ಳ ಹಾವಿನಂತೆ, ಕೊರಳಲ್ಲಿ ಕಟ್ಟಿದ ಲಿಂಗವು ಗಳದ ವಿಷವುಳ್ಳ ಹಾವಿನಂತೆ ! ತೊರೆಯಲಷ್ಟೆ ಯೋಗ್ಯನಲ್ಲದೆ ನೆರೆಯಲು ಯೋಗ್ಯನಲ್ಲದ ಅನಾಚಾರನರಕದ ಕೆಟ್ಟಕೀಟವಾದ ಲಿಂಗಧಾರಿದುರ್ಭಕ್ತತಾಮಸನು ಆಚಾರಸ್ವರ್ಗದ ಲಿಂಗಾಂಗಿದೇವನಲ್ಲವು. ಭವಧಾರಿಯಾದ ತಾಮಸನನ್ನು ಲಿಂಗಾಂಗಿಯೆಂದು ಮೋಹಗೊಳ್ಳದೆ ಎಂದೂ ಎಲ್ಲಿಯೂ ಹೇಗೆಯೂ ತೊರೆಯಲೇ ಬೇಕು.

### || ಕುಲಾದಿಮದವ್ಯರ್ಥವಾಗ್ಮಿಬಿರಿನಿರಸನ ||

*೮. ಅರ್ಥದ ಮದ, ಅಹಂಕಾರದ ಮದ, ಕುಲಮದ ಬಿಡದು*
*ಸಮಯಚಾರ ಸಮಯಭಕ್ತಿ ಇನ್ನಾರಿಗೆಯೂ ಅಳವಡದು ನೋಡಾ*
*ಮಾತಿನ ಮಾತಿನ ಮಿಂಚಿನ ಥಾಳಕರಿಗೆ*
*ಸಮಯಭಕ್ತಿ ಇನ್ನೆಲ್ಲಿ ಯದೊ ?*
*ಕೂಡಲ ಚೆನ್ನಸಂಗಯ್ಯ !* ||೨-೨||

ಕಾಲಕ್ರಮೇಣ ಮುಪ್ಪುಗೊಂಡು ಒಪ್ಪವಳಿದು ಮಣ್ಣಾಗೂಡುವಂತಹ ಕುಲದಿಂದ, ಛಲದಿಂದ, ಸಿರಿಯಿಂದ, ಚೆಲುವಿನಿಂದ, ಹರೆಯದಿಂದ, ಅರಿವಿನಿಂದ, ಅಧಿಕಾರದಿಂದ, ಸಾಧನೆಯಿಂದ ಸೊಕ್ಕಿ ಉಕ್ಕುವ ಮರುಳುಮಾನವನಲ್ಲಿ ಬಸವ ಆದಿಪ್ರಮಥರು ಕಂಡು ಉಂಡು ಕರುಣಿಸಿರುವ ಧರ್ಮಸಮ್ಮತ ಆಚಾರಸತ್ಕ್ರಿಯೆಯಾಗಲಿ, ಧರ್ಮಸಮ್ಮತ ವ್ಯಕ್ತಿಭಕ್ತಿಯಾಗಲಿ ಎಂದೆಂದೂ ನೆಲೆಗಾಣವು. ನುಡಿಯಲ್ಲಿ ಬೆಳಗಿಮಿಂಚಿ ನಡೆಯಲ್ಲಿ ಜಾರಿಮಿಂಚಿಬಿಡುವ ಡಾಂಭಿಕ ತಾಮಸರಿಗೆ ಬಸವಧರ್ಮದ ನೆಲೆಕಲೆಸಕೀಲಗಳು ಅಳವಡವು !

|| **ಸೂತಕಭ್ರಾಂತಿನಿರಸನ** ||

*೯. ಜಾತಿಸೂತಕ ಬಿಡದು , ಜನನಸೂತಕ ಬಿಡದು*
*ಪ್ರೇತಸೂತಕ ಬಿಡದು , ರಜಸ್ಸೂತಕ ಬಿಡದು*
*[ಉಚ್ಛಿಷ್ಟಸೂತಕ ಬಿಡದು]*
*ಭ್ರಾಂತುಸೂತಕ ಬಿಡದು ; ವರ್ಣಸೂತಕ ಬಿಡದು*
*ಇವರೆಂತು ಭಕ್ತರಹರು ?*
*ಹುಸಿಮುಂಡನೆ ಮಾಡಿದಲ್ಲಿ, ಬಾಯಿಗೆ ಬೆಲ್ಲವ ತೊಡೆದಲ್ಲಿ*
*ಸದ್ಗುರುಲಿಂಗವು ಮೂಗಕೊಯ್ಯದೆ ಮಾಬನೆ ?*
*ಕಾಡುಕಿಚ್ಚಿನ ಕೈಯಲ್ಲಿ ಕರಡದ ಹುಲ್ಲು ಕೊಯಿಸಿದಂತಿರಬೇಕು ಭಕ್ತಿ*
*ಹಿಂದೆ ಮೆದೆಯಿಲ್ಲ, ಮುಂದೆ ಹುಲ್ಲಿಲ್ಲ ಇದು ಕಾರಣ,*
*ಕೂಡಲ ಚೆನ್ನಸಂಗನ ಭಕ್ತಿಸ್ಥಲ*
*ನಿಮ್ಮ ಶರಣಂಗಲ್ಲದೆ ಅಳವಡದು* ||೨-೬||

ಅರುಹಿನ ಕುರುಹು ಹೊಲೆಗೊಂಡಿತೆಂದು ಜಾತಿಹೊಲೆ, ಹುಟ್ಟಿನ ಹೊಲೆ, ಸಾವಿನ ಹೊಲೆ, ಮುಟ್ಟಿನ ಹೊಲೆ, ಎಂಜಲಹೊಲೆಗಳ ಸಂದೇಹಭ್ರಾಂತಿಯಲ್ಲಿ ತೊಳಲುವ ಹೊಲೆಮನದವರ ಅಂಗದ ಮೇಲೆ ಪರಮಶುಚಿಲಿಂಗವೆಂತೂ ನೆಲೆಗೊಳ್ಳದು. ಲಿಂಗಾಂಗಿಗಳಲ್ಲಿ ಇಲ್ಲದ ಸಲ್ಲದ ಜಾತಿ, ವರ್ಣ, ಕುಲ, ಆಶ್ರಮ, ಗೋತ್ರ, ನಾಮಗಳಲ್ಲಿನ ಮೇಲುಕೀಳುಗಳನ್ನು ಆರೋಪಿಸಿ ಮೇಲರಿಮೆಯಿಂದ ಕೀಳೆಂದು ಬೀಳುಗೈವ ಹಾಳುಗೋಳುಗಳು ಲಿಂಗವಂತರಾಗಿದ್ದರೂ ಬೆರೆಯಲು ಸರ್ವಥಾ ಯೋಗ್ಯರಲ್ಲ, ತೊರೆಯಲು ಸರ್ವಥಾ ಯೋಗ್ಯರು ! ಇವರಿಗೆ ಅರುಹುಕುರುಹುಗಳನ್ನಿತ್ತವನು ದುರ್ಗುರುವಲ್ಲದೆ ಸದ್ಗುರುವಲ್ಲ. ಇವರ ಅಂಗವನ್ನು ಕೊಂಡುದು ಮರೆಪಿನ ಕುರುಹಲ್ಲದೆ ಚಿಲ್ಲಿಂಗವಲ್ಲ. ಇವರ ಬಳಿ ಬಂದ ಲಿಂಗಾಂಗಿಯು ಮಂಗಮನುಜನಲ್ಲದೆ ತುಂಗಜಂಗಮವಲ್ಲ !

|| ಭಿನ್ನತಾಮಸ ಉಪಾಧಿಕ ಗುರುನಿರಸನ ||

*೧೦. ಕುಲಹೀನ ಶಿಷ್ಯಂಗೆ ಅನುಗ್ರಹವ ಕೊಟ್ಟು,*
*ತನ್ನ ಪ್ರಾಣಲಿಂಗವ ನಿಕ್ಷೇಪಿಸಿ ಕರ್ಣ್ಣಮಂತ್ರವ ಹೇಳಿ*
*ಆ ಗುರು ಬಂದು ಆ ಶಿಷ್ಯನ ಮನೆಯ ಹೊಗಲೊಲ್ಲದೆ*
*ಅಕ್ಕಿ, ತುಪ್ಪವನೀಸಿಕೊಂಬವನ ಕೇಡಿಂಗೆ ಇನ್ನೇವೆನಯ್ಯ ?*
*ತನ್ನ ಪ್ರಾಣಲಿಂಗವನವನಿಗೆ ಕೊಟ್ಟು,*
*ತಾ ಹೊಗೆನೆಂಬ ವ್ರತಗೇಡಿಯ ಇನ್ನೇನೆನ್ನಬಹುದಯ್ಯ ?*
*ಆವನ ಧನಕ್ಕೆ ತಂದೆಯಾದನಲ್ಲದೆ ಆವನಿಗೆ ತಂದೆಯಲ್ಲ !*
*ಇದು ಕಾರಣ, ಕೂಡಲ ಚೆನ್ನಸಂಗಯ್ಯ*
*ಆ ಲಿಂಗವ ಮಾರಿಕೊಂಡು ಉಂಬ*
*ಬಂಗಗಾರ್ರ್ಗರು ಕೆಟ್ಟ, ಕೇಡನೇನೆಂಬೆನಯ್ಯ* ||೨-೪||

ಸದಾಚಾರದ ಬೆಳಗ ತೋರುವೆನೆಂದು ಬರಿದೆ ಬೊಗಳ ಮುಷ್ಟಿಗಾಗಿ ಮುಷ್ಟಿನ ಲಿಂಗವನ್ನು ಕೊಟ್ಟು, ಆ ಹೆಣ್ಣ ಶಿಷ್ಯನಿಗೆ ಏಕೀಕರಣಗೈಯದೆ ನೂಕೀಕರಣಗೈದು ಹಳಿ ಹಾರುವರಂತೆ ಅಮೃತಮಯಿಯನ್ನು ಒಯ್ಯುವ ಜಾತಿಘಾತಕನಾದ ತಾಮಸಗುರುವು ಇಪ್ಪುದು ಮರವೆಯಲ್ಲದೆ ಅರಿವಲ್ಲ . ಸೋಂಕಿನ ಹಾಳುಕುರುಹಲ್ಲದೆ ಅರುವಿನ ನಿಜಕುರುಹಲ್ಲ ' ಲಿಂಗವನ್ನು ಮಾರಿ ಬದುಕುವ ಲಿಂಗಜೀವಕ ಭಂಗಗಾರರನ್ನು ಲಿಂಗಾಂಗಸಾಮರಸ್ಯವನ್ನು ಕಂಡ ಕಾಣಿಸಿಕೊಡುವುದಿಲ್ಲ ಸದ್ಗುರುಸ್ವಾಮಿಯೆಂದು ಬರಿದೆ ಭ್ರಮಿಸಬಾರದು

|| ಅನ್ಯಾಶ್ರಯಪಾರದ್ವಾರಕಾಮ್ಯಭಕ್ತಿನಿರಸನ ||

*೧೧. ಸದ್ಗುಣ ಸದ್ಭಾವಿ ಅನ್ಯರಲ್ಲಿ ಕೈಯ್ಯಾಂತು ಬೇಡ*
*ಲಿಂಗವ ಮುಟ್ಟಿದ ಕೈ ಮೀಸಲು*
*ಕಂಗಳಲ್ಲಿ ಒಸದು ನೋಡ ಪರವಧುವ*
*ಮನದಲ್ಲಿ ನೆನೆಯನನ್ಯವ, ಮಾನವಸೇವೆಯ ಮಾಡ*
*ಲಿಂಗವ ಬೇಡ, ಲಿಂಗದ ಹಂಗನೊಲ್ಲ*
*ಕೂಡಲ ಚೆನ್ನಸಂಗಾ ನಿಮ್ಮ ಶರಣ* //೨-೫//

ಸದ್ಭಾವಸದ್ಭಾವಿಯಾದ ಲಿಂಗಾಂಗಿಯು ಹಸ್ತವರುಷ ಲಿಂಗವೇಧೆಗೈದು ಪರಮಪವಿತ್ರವಾಗಿರುವ ಲಿಂಗಹಸ್ತವನ್ನು ಯಾಚನೆಗಾಗಿ ಚಾಚಬಾರದು , ನೋಟವರುಷ ಲಿಂಗವೇಧೆಗೈದು ಪರಮಪವಿತ್ರವಾಗಿರುವ ಲಿಂಗನೋಟವನ್ನು ಕಾಮವಿಕಾರವಿಡಿದು ಪರಸತಿಯನ್ನು ನೋಡಲು ಬಳಸಲಾಗದು. ತಾನು ಬಂದ ಯೋನಿ, ತಾನು ಉಂಡ ಮೊಲೆಯಿಂದು ಪರಿಭಾವಿಸಿ ತನ್ನ ತಾಯಿಯಂತೆ ಪರಸ್ತ್ರೀಯನ್ನು ಕಾಣಬೇಕಲ್ಲದೆ ಹೆಕ್ಕಳಗೊಂಡು ಬೆಕ್ಕಸದಿಂದ ನೋಡಿಕೂಡಿ ಆ ತಾಯಿಗೆ ಗಂಡನಾಗಬಾರದು ' ಮನವರುಷ ಲಿಂಗವೇಧೆಗೈದು ಪರಮಪವಿತ್ರವಾಗಿರುವ ಲಿಂಗಮನವನ್ನು ನೀಚಸಂಕಲ್ಪವಿಕಲ್ಪಗಳ ಮಲಕೊಳೆಗಳಿಂದ ಹೊಲೆಗೊಳಿಸಬಾರದು. ಅಂಗದ ಮೇಲೆ ಲಿಂಗವುಳ್ಳವರನ್ನು

ಸಹವಾಸಬಲದಲ್ಲಿ ಓಲೈಸಬೇಕಲ್ಲದೆ ವಿಶಾಲಿಷಿಕ್ತ್ ಮಂಗಮನುಜರ ವದಿಮೊತ್ತಾಗಿರಬಾರದು ಅಂಗವ್ಯಕ್ತಪರ್ಯ್ಯತಲಿ ತನ್ನ ಅಂಗದ ಮೇಲಣ ಇಷ್ಟಲಿಂಗವನ್ನು ಸಹ 'ಅದನ್ನು ತೆಗೆ ! ಇದನ್ನು ಕೊಡು' ಎಂದು ತರಕಟಿ ಕಾವಲಾಗದು. ಬರಿದೆ ಬಾಡಿ ಹಂಗಿಗನಾಗಬಾರದು. ಶ್ರೀಕಾಲಿಕಾರನಂತೆ ಫಲವವನ ಬಯಸಿ ಇಷ್ಟಲಿಂಗಾರ್ಚನೆಗೆಯಬಾರದು

|| **ಸಂಟುಭವಿಭಕ್ತವ್ಯಾಮೋಹನಿರಸನ** ||

*೧೨. ಭವಿತನಕ್ಕೆ ಹೇಸಿ ಭಕ್ತನಾದ ಬಳಿಕ*
*ಭವಿಯೊಡನೆ ಸಂಗವು ಭಂಗವೆಂದರಿಯದು*
*ಭವಿಯೊಡನೆ ಸಂಗ ! ಕೂಡಲ ಚೆನ್ನಸಂಗಯ್ಯ*
*ಅಪರತ್ರಲೂ ಇಲ್ಲ. ಇತ್ತಲೂ ಇಲ್ಲ* //೨-೬//

ಸಂಸರ್ಗದಿಂದಲೆ ದೋಷವಾಗಲಿ ಗುಣವಾಗಲಿ ಉಂಟಾಗುವುದಾಗಿ ಲಿಂಗಾಂಗಿಯು ಲಿಂಗಾಂಗಿಗಳೊಡನೆಯೇ ಸಹಸಂಗಗೈದು ತನ್ನ ವರಗುರುವಾದ ಅರಿವು-ಆಚಾರ-ಅನುಭಾವಗಳನ್ನು ಸದಾ ವರ್ಧಿಸಿಕೊಳ್ಳಬೇಕಲ್ಲದೆ ದುರ್ಜ್ಞಾನ, ದುರಾಚಾರ, ದುರ್ಭಾವಗಳೊಂದು ಅರಿವು-ಆಚಾರ-ಅನುಭಾವಗಳ ಬಗೆಗಿನ ಅರುಹುಕುರುಹುಗಳೆರಡನ್ನೂ ನೀಗಿ ಬೀಗುವ ಭವಿಜನ್ಮಾತ್ಮರ ಸಂಗದಿಂದ ತನ್ನ ಅರಿವು-ಆಚಾರ-ಅನುಭಾವಗಳನ್ನು ಮರ್ದಿಸಿಕೊಳ್ಳಲಾಗದು.

|| **ಅಂತರಂಗತಾಮಸಭವಿನಿರಸನ** ||

*೧೩. ಹೊರಗಣ ಭವಿಯ ಕಳೆದೆವೆಂಬರು*
*ಒಳಗಣ ಭವಿಯ ಕಳೆಯಲರಿಯರು*

ಕಾಮವೆಂಬುದೊಂದು ಭವಿ ; ಕ್ರೋಧವೆಂಬುದೊಂದು ಭವಿ
ಲೋಭವೆಂಬುದೊಂದು ಭವಿ ; ಮೋಹವೆಂಬುದೊಂದು ಭವಿ
ಮದವೆಂಬುದೊಂದು ಭವಿ ; ಮತ್ಸರವೆಂಬುದೊಂದು ಭವಿ
ಆಸೆಯೆಂಬುದೊಂದು ಭವಿ ; ಆಮಿಷವೆಂಬುದೊಂದು ಭವಿ
ಹೊನ್ನೆಂಬುದೊಂದು ಭವಿ , ಹೆಣ್ಣೆಂಬುದೊಂದು ಭವಿ
ಮಣ್ಣೆಂಬುದೊಂದು ಭವಿ ! ಇಂತೀ ಭವಿಯ ಕಳೆದುಳಿದ
ಕೂಡಲ ಚೆನ್ನಸಂಗಾ ನಿಮ್ಮ ಶರಣ ||೨-೭||

ಲಿಂಗಾಂಗಿಯು ಅಂಗದ ಮೇಲೆ ಲಿಂಗವಿಲ್ಲದ ಮಂಗಮಾನವರಾದ ಭಂಗಭವಿಗಳನ್ನು ಮಾತ್ರ ತೊರೆದಲ್ಲಿ ಹುರುಳಿಲ್ಲ, ಹುರುಳಿಲ್ಲ. ಅಂಗದ ಒಳಗೆ ಲಿಂಗಕ್ಕೆ ಸಲ್ಲದ ಮಂಗತನವಾಗಿರುವ ಬಯಕೆ ಕಾಮ, ಜಿಗುಟುತನ, ಮರುಳುತನ, ಸೊಕ್ಕು , ಹೊಟ್ಟೆಕಿಚ್ಚು, ದುರಾಸೆ, ಮನದ ಸೆಳೆತ ಪ್ರಾಣದ ಭವದ ನಂಟು, ಮನೋರಥಮಯ ಸಂಕಲ್ಪ, ಕನಕಮಣ್ಣಿನ ವಿಷಯದ ಸೊಕ್ಕುಗಳೆಂಬ ಹೆಣ್ಣಿನ ಬಗೆಯ ಹೊಲೆಭವಿತನಗಳನ್ನು ಎಚ್ಚರಿಕೆಯಿಂದ ತೊರೆಯುವುದು

|| ಸರ್ವಾಂಗಲಿಂಗಾನುವರ್ತನ ||

೧೪. ಲಿಂಗ ಮುಂತಾಗಿಯೆ ನಡೆವನು ಶರಣನು
ಲಿಂಗ ಮುಂತಾಗಿಯೆ ನುಡಿವನು ಶರಣನು
ಲಿಂಗ ಮುಂತಾಗಿಯೆ ತೃಪ್ತನು ಶರಣನು
ಲಿಂಗಕಾಯ ಶರಣ ; ಶರಣಕಾಯ ಲಿಂಗ
ಇದು ಕಾರಣ ಕೂಡಲ ಚೆನ್ನಸಂಗಯ್ಯ
ನಿಮ್ಮ ಶರಣ ಸರ್ವಾಂಗಲಿಂಗಿ ||೨-೮||

ಲಿಂಗಧಾರಿ ಸದಾಶುಚಿಯುಳ್ಳವನಾಗಿ ಲಿಂಗಾರ್ಪಣಯೋಗ್ಯವಾದ ಮಂಗಳಪದಾರ್ಥಗಳನ್ನು ಇಷ್ಟಲಿಂಗಕ್ಕೆ ಅರ್ಪಿಸಿ ಪ್ರಸಾದರೂಪದಲ್ಲಿಯೆ ಲಿಂಗಮುಂತಾಗಿಯೆ, ಲಿಂಗಮುಖವಾಗಿಯೆ, ಲಿಂಗಭೋಗೋಪಭೋಗವಾಗಿಯೆ, ಲಿಂಗಸಹವಾಗಿಯೆ, ಲಿಂಗವಾಗಿಯೆ ಉಣ್ಣಬೇಕು. ತನ್ನ ಸರ್ವೇಂದ್ರಿಯವ್ಯವಹಾರಗಳನ್ನೂ ಲಿಂಗಾರ್ಪಣಯೋಗ್ಯವಿದ್ದಲ್ಲಿ ಮಾತ್ರ ಲಿಂಗಾರ್ಪಿತಗೈದ ಪ್ರಸಾದರೂಪದಲ್ಲಿಯೆ ಲಿಂಗಮುಂತಾಗಿಯೆ ಸೇವನೆಗೈದು ಸವಿ, ಸುಖ, ತೃಪ್ತಿಗಳನ್ನು ಹೊಂದಬೇಕು. ಅದು ಕಾರಣದಿಂದಲೆ ದೇವದೇಹಿಕ ಭಕ್ತ, ಭಕ್ತದೇಹಿಕ ದೇವನೆಂದೆನ್ನಿಸಿತು. ಅಂತಪ್ಪ ಶರಣನ ಸರ್ವಾಂಗವೂ ಲಿಂಗಮಯವೂ ಲಿಂಗಸ್ವರೂಪವೂ ಆಗಿ ಪರಮಶುಚಿಗೊಂಡಿಪ್ಪ

### || ವಿಷಚಾರಿಕ ಉಪಾಧಿಕ ಸಂಕಲ್ಪಾರ್ಚನನಿರಸನ ||

*೧೫. ಅಷ್ಟವಿಧಾರ್ಚನೆ ಷೋಡಶೋಪಚಾರದ ಮಾಡಲಾಗದು*
*ಉಪಮಾಸ್ತ್ರ ಮಾನವ ಸೋಂಕಿಮಾಡುವ*
*ತುಡುಗುಣಿನಾಯಿಗಳು ನೀವು ಕೇಳಿರೋ*
*ಉಪಮಾನವೆಂದೇನೋ ಶರಣಂಗೆ ?*
*ಅಸ್ತ್ರಮಾನವೆಂದೇನೋ ಶರಣಂಗೆ ?*
*ಮಹಾಮೇರುವಿನ ಮರೆಯಲ್ಲಿಪ್ಪ ತರುಸೆಲೆಸರ್ಕರುವ*
*ಭಾವಪ್ರಮಿತರ ಮೆಚ್ಚ*
*ಕೂಡಲ ಚೆನ್ನಸಂಗಮದೇವ !* ||೨-೯||

ಸರ್ವಾಂಗಲಿಂಗಿಯಾದ ಲಿಂಗಾಂಗಿಯು ತಾನೆ ಸ್ವಯಂಲಿಂಗವಾಗಿಯೇ ಸಕಲಷ್ಟಾನಕರ್ಮವ್ಯಾಪಾರಗಳನ್ನು ಲಿಂಗಾರ್ಪಣಗೈಯುವುದಲ್ಲದೆ ಭಿನ್ನವಿಟ್ಟು ಫಲಪದವನ್ನು ಬಯಸಿ ಎಂಟುಬಗೆ, ಹದಿನಾರು ಉಪಚಾರಗಳನ್ನು ಬಹಿರಂಗವ್ಯವಹಾರವುಳ್ಳವಾದ ತನ್ನ ಇಷ್ಟಲಿಂಗಕ್ಕೆ ಎಸಗಲಾಗದು

ಭಾನುವಿನ ಉದಯಕ್ಕೆ ಒಳಗಾಗದ ಹಗಲಿರುಳುಗಳೆರಡನ್ನೂ ಮೆಟ್ಟಿನಿಂತ ಕಾಲಕಾಲನೆನಿಸಿದ ಲಿಂಗಾಂಗಿಯು ಹಗಲಿನ ಪೂಜೆ, ನಡುಹಗಲಿನ ಪೂಜೆ, ಸಂಜೆಯ ಪೂಜೆ, ಇರುಳಿನ ಪೂಜೆಯೆಂಬ ಕಾಲಬೇಳೆಕಾಲವನ್ನು ಒಪ್ಪಿಸಲಾಗದು. ಮನುಷ್ಯರುಮಾಡುವ ನೇಮಸಲ್ಲಿಯೆ ನಿಂದು ಮತ್ತೊಂದು ಮರದ ನೆರಳಿಗಾಗಿ ಭ್ರಾಂತಿಗೊಂಡು ಅರಸದೆ ಭಾವಪ್ರಮಿತವಾಗದೆ ಇರಬೇಕು. ಹುಟ್ಟು-ಹೊಂದುಗಳನ್ನು ಮೆಟ್ಟಿನಿಂತ ಲಿಂಗಾಂಗಿಗೆ ಹಗಲು ಇರುಳಿನ ಭ್ರಾಂತಿಯೆ ಸಲ್ಲ. ಅವನ ಎಚ್ಚರವೆ ಲಿಂಗಾರ್ಚನೆ ಅವನ ನಿದ್ರೆಯೆ ಮಹಾಸಮಾಧಿಸ್ಥಿತಿಯು ! ಅಂಗದ ಮೇಲೆ ಲಿಂಗಗೊಂಡ ಲಿಂಗಾಂಗಿಯು ಉಸುರ ಒಡೆಯನಿದ್ದೂ ಹಾಲುಣಿಸಿದ್ದರೂ ಹೊಲಸನ್ನು ಕಂಡೊಡನೆ ಜಿಗಿಯುವ ತುಡುಗುಣಿನಾಯಿಯಂತೆ ವರ್ತಿಸಲಾಗದು

|| ಲಿಂಗವಿಯೋಗವಿಭ್ರಾಂತಿನಿರಸನ ||

*೧೬. ದೇವರು ಬಿದ್ದರು, ದೇವರು ಬಿದ್ದರೆಂದು*
*ಸಾಹಿತ್ಯದ ಕೂಡ ಸಾಯಬೇಕೆಂಬಿರಿ*
*ಆವಾಗ ಬಿದ್ದಿತ್ತೆಂದರಿಯಿರಿ ; ಆವಾಗ ಇದ್ದಿತ್ತೆಂದರಿಯಿರಿ*
*ಆವಾಗ ಇದ್ದಿತ್ತು ? ಆವಾಗ ಬಿದ್ದಿತ್ತು ?*
*ಎಂದು ಬಲ್ಲರೆ ನೀವು ಹೇಳಿರೆ **
*ಕೂಡಲ ಚೆನ್ನಸಂಗಯ್ಯನ ಅರ್ಪಿತವಾಗಲಿದ್ದಿತ್ತು*
*ಮರೆದಾಗ ಬಿದ್ದಿತ್ತು !* ||೨-೧೦||

* ಉಪಮಾದಿಕಾರದ ಅಗಂತುಕ ಸಂಸ್ಕೃತವಾಕ್ಯಗ್ರಂಥದಲ್ಲಿದೆ !

ಲಿಂಗಾಂಗಿಯು ನಿಜದ ಅರಿವನ್ನು ಆ ಅರುಹಿನ ಕುರುಹನ್ನು ಬಿಟ್ಟುಕತ್ತಿಯಂತೆ ಸದಾ ಎಚ್ಚರಿಕೆಗೊಂಡು ದೃಢವಾಗಿ ಹಿಡಿಯಬೇಕಲ್ಲದೆ ಮಾಡು ಮರುಳು ಮದಮತ್ತಗೊಂಡು ಬಿಸುಡಲಾಗದು ಹಾಗೆ ಬಿಸುಡುವಲ್ಲಿ ಆ ಮಾನವನಿಗೆ ಪ್ರಾಣಹಾನಿಯೆ ಪರಿಹಾರವು ಎಂದು ಸೂಚಿಸುವ ದೀಕ್ಷಾಕಾಲದಲ್ಲಿ

ವಿಚ್ಛೇದಿಸಿದ್ದನ್ನು ಪ್ರಮಾದದಿಂದ ಮರೆತು ಅರಿವಿನಿಂದ ಜಾರಿ, ಕುರುಹನ್ನು ಜಾರಿಸಿಕೊಂಡು ಪ್ರಾಯಶ್ಚಿತ್ತವೆಂದು ಪ್ರಾಣವನ್ನು ತೊರೆಯಲು ನೀರು, ಬೆಂಕಿ, ವಿಷ, ನೇಣು, ಶಂವರಗಳನ್ನು ಅವಲಂಬಿಸುವುದು ಹೆಡ್ಡತನವಲ್ಲದೆ ದೊಡ್ಡತನವಲ್ಲ. 'ಅರಿತಾಗಲೆ ಆರುಹುಕುರುಹುಗಳು ಇದ್ದವು! ಮರೆತಾಗಲೇ ಆರುಹುಕುರುಹುಗಳು ಬಿದ್ದವು!' ಎಂದು ಮನದಲ್ಲಿ ಪಶ್ಚಾತ್ತಾಪಗೊಂಡು ಮರಳಿ ಪ್ರಮಾದಗೈಯದೆ ಮತ್ತೊಮ್ಮೆ ಪ್ರಥಮದ ಆರುಹುಕುರುಹುಗಳನ್ನು ದೃಢಗುರುವಿನಿಂದಲೆ ಪಡೆದು ದೃಢವಾಗಿ ಮುಡಿಯದೇಕಿಲ್ಲದೆ ಮರೆಯದಂತೆ ಒಪಲಿ ನೀಗಿ ಮಡಿಯಬಾರದು.

### | ಗುರುಲಿಂಗಜಂಗಮಪ್ರಸಾದದ್ರೋಹನಿರಸನ |

*೧೭. ಲಿಂಗದ್ರೋಹಾದವನ ಮುಖವ ನೋಡಲಾಗದು*
*ಮತ್ತೆ ನೋಡಬಹುದು ! ಏಕೆ ? ಮುಂದೆ ಗುರುವಿಪ್ಪ ಕಾರಣ !*
*ಗುರುವಿನಲ್ಲಿ ದ್ರೋಹಾದವನ ಮುಖವ ನೋಡಲಾಗದು*
*ಮತ್ತೆ ನೋಡಬಹುದು ! ಏಕೆ ? ಮುಂದೆ ಜಂಗಮವಿಪ್ಪ ಕಾರಣ*
*ಜಂಗಮದಲ್ಲಿ ದ್ರೋಹಾದವನ ಮುಖವ ನೋಡಲಾಗದು*
*ಮತ್ತೆ ನೋಡಬಹುದು ! ಏಕೆ ? ಮುಂದೆ ಪ್ರಸಾದವಿಪ್ಪ ಕಾರಣ*
*ಪ್ರಸಾದದಲ್ಲಿ ದ್ರೋಹಾದವನ ಮುಖವ ನೋಡಲಾಗದು*
*ಕೂಡಲ ಚೆನ್ನಸಂಗಮದೇವ !* //೩-೧೧//

ಆರುಹಿನ ಕುರುಹಿಗೆ ಅನ್ಯಥಾವಿದ್ಯೆವಸ್ತ್ರತಿಕೆಸಂಗದಿಂದ ದ್ರೋಹಗೈದವರು ಕ್ಷಮೆಗೆ ಯೋಗ್ಯರಲ್ಲವಾದರೂ ಆರುಹುಕುರುಹುಗಳನ್ನು ಪರಿಣೀಡುವ ಗುರುವಿರುವುದರಿಂದ ಕ್ಷಮಿಸಬಹುದು. ಆರುಹುಕುರುಹುಗಳನ್ನು ಹೊಂದಿಯೂ ಧರ್ಮಜ್ಞಾನದ ಶ್ರವಣ-ಮನನ-ನಿದಿಧ್ಯಾಸನಗೈದ ಜಂಗಮದ್ರೋಹಿಯು ಕ್ಷಮೆಗೆ ಯೋಗ್ಯನಲ್ಲವಾದರೂ ಆ ಬಗೆಗೆ ಶಿಕ್ಷೆಶೀಲ ಶಸ್ತ್ರಮೆಸ್ವಗೈದ ಕಾಲದಜಂಗಮವಿರುವುದರಿಂದ ಕ್ಷಮಿಸಬಹುದು. ಶಿಕ್ಷೆಶೀಲವೀಯುವ ಲಿಂಗಾಂಗಿಜಂಗಮವಿದ್ದೂ

ಭವಿಜನ್ಮಾತ್ಮರಾದ ಭಿನ್ನಜೀವಿಗಳ ಶಿಕ್ಷೆಗೆ ಶಿವನೋಲುವಿದುವ ಜಂಗಮದ್ರೋಹಿಯು ಕ್ಷಮೆಗೆ ಅರ್ಹನಲ್ಲವಾದರೂ ಬಸವಾದಿಪ್ರಮಥರಿಂದ ಕಂಡು ಉಂಡು ಕರುಣಿಸಲ್ಪಟ್ಟಿರುವ ಅನುಭಾವ ಸದ್ಬೋಧೆಯು ಪ್ರಸನ್ನತೆಯೆಂಬ ಪ್ರಸಾದವು ಜಂಗಮದ್ರೋಹಿಯನ್ನೂ ತಿದ್ದ ಬಲ್ಲುದಾಗಿ ಕ್ಷಮಿಸಬಹುದು. ಏನನ್ನು ತಿಳಿದಲ್ಲಿ ಎಲ್ಲವನ್ನೂ ತಿಳಿದಂತೆ ಆಗುವುದೋ ಅಂತಹ ಪ್ರಮಥಪ್ರಸಾದಪ್ರಸನ್ನತೆಗೆ ದ್ರೋಹಗೈದು ಭವಿದೈವಗಳ ಹೊಲಸುಜಡವಿಗ್ರಹಗಳಿಗೆ ಮೆತ್ತಿ ತೆಗೆದ ಜಡಗುಣಗಳನ್ನೆ ಭವಿಬೋಧೆಗಳನ್ನೆ ಪ್ರಸಾದವೆಂದು ನಾಲಿಗೆ ಚಾಚಿ ಒಡಲ ಕಕ್ಕುಲಿತೆಗೆ ಮನದ ಭ್ರಾಂತಿಗ ಸೇವಿಸುವ ನಿಜಪ್ರಸಾದದ್ರೋಹಿಯಾದ ಕಾಮಸಮರ್ಥಕನಾದ ಲಿಂಗಭವಿಗೆ ಕ್ಷಮೆಯು ಎಂದೆಂದಿಗೂ ಇಲ್ಲ! ನಂಬಿದರೆ ಬಸವಬೋಧೆಯು ಅಮೃತಸಿಂಚನಗೈವ ಮಹಾಪ್ರಸಾದ ನಂಬದಿದ್ದರೆ ಆ ಮಹಾಪ್ರಸಾದವೆ ಜಡಲಿಂಗಾಂಗಿಯನ್ನು ಸಿಂಗಿಕಾಳಕೂಟ ಸಂದೇಹವಿಷವಾಗಿ ಪರಿಣಮಿಸಿ ಕೊಲ್ಲುವುದರಿಂದ ಶರಣಪ್ರಸಾದದಲ್ಲಿ ರುಚಿಪಾತ್ಗೈದು ಉಂಡುಬಿಟ್ಟ ಎಂಜಲೆಂದು ಹೀಗಳೆವ ಕಾಮಸ ಲಿಂಗಾಂಗಿಗೆ ಎಂದೆಂದಿಗೂ ಕ್ಷಮೆಯಿಲ್ಲವು.

|| ಅಸದ್ಭಸತಾಮಸದುರ್ಭಕ್ತನಿರಸನ ||

*೧೪. ಹಲವು ಕಾಲ ಹಂಸೆಯ ಸಂಗದಲ್ಲಿದ್ದರೇನು ?*
*ಬಕನು ಶುಚಿಯಾಗಬಲ್ಲುದೆ ?*
*ನಿಧಿನಿಧಾನದೊಳಗಿದ್ದರೇನು ?*
*ಪಾಷಾಣ ಹೊನ್ನಾಗಬಲ್ಲುದೆ ?*
*ಕಲ್ಪತರುಗಳ ಸಂಗದಲ್ಲಿದ್ದರೇನು ?*
*ಕೊರಡು ಫಲವಾಗಬಲ್ಲುದೆ ?*
*ಕಾಶೀಕ್ಷೇತ್ರದಲ್ಲಿ ಶುನಕನಿದ್ದರೇನು ?*
*ಅಪರ್ಗೆ ಕ್ಷೀರ ಪಂಚಾಮೃತವಾಗಬಲ್ಲುದೆ ?*
*ಬಿಂದುಗ ಹಾಲೋಗಗೆ ಇಕ್ಕಿಲ ಹಾಕಿದರೇನು ?*

*ಬಿಳಿದಾಗಬಲ್ಲುದೆ ? ಇದು ಕಾರಣ,*
*ಕೂಡಲ ಚೆನ್ನಸಂಗನ ಶರಣರ ಸನ್ನಿಧಿಯಲ್ಲಿದ್ದರೇನು ?*
*ಅಸದ್ಭನ ಸದ್ಭಕ್ತನಾಗಬಲ್ಲನೆ ?* ||೨-೧೩||

ಜಡೆಕಲ್ಲು ಎನಿತು ಕಾಲ ನೀರಲ್ಲಿದ್ದರೂ ಮೃದುವಾಗಲರಿಯದು ! ಜನ್ಮಜಡನೂ, ಮಲಜೀವಿಯೂ, ವಿಕಾರವಿಭ್ರಾಂತನೂ ಅಸ್ಪೃಶ್ಯವಸ್ತುರತಿ, ಭವಿಸಂಗ, ಭವಿಪಾಕ, ಪರಸ್ತ್ರೀಕಾಂಕ್ಷೆ, ಪರಧನಾಂಕಾಕ್ಷೆ, ಪರನಿಂದೆ, ಸುಳ್ಳು, ಹಿಂಸೆ, ತಾಮಸಭಕ್ತಸಂಗವೆಂಬ ಒಂಬತ್ತು ನಾಯಕನರಕಗಳಲ್ಲಿ ಹುಳುವಾಗಿ ಹೊರಳುವವನೂ ಅರಿವು-ಆಚಾರ-ಅನುಭಾವ ಶೂನ್ಯನೂ ಆದ ಅಸದ್ಭನನು ಎನಿತುಕಾಲ ಲಿಂಗಾಂಗಿಯಾಗಿದ್ದರೂ ಶರಣಸಂಗದಲ್ಲಿದ್ದರೂ ಹೇಯನಾದ ತಾಮಸಲಿಂಗಾಂಗಿ ದುರ್ಭಕ್ತನೆನ್ನಿಸುವನಲ್ಲದೆ ಉಪಾದೇಯನಾದ ಸಹಜಲಿಂಗಾಂಗಿಸದ್ಭಕ್ತನೆಂದೆನ್ನಿಸನು

|| **ಕೂಟಗೌಣಮೂಟಪ್ರಧಾನನಿರ್ದೇಶ** ||

*೧೪ ಜಂಗಮ ಬರಬೇಕೆಂದು ಲಿಂಗಾರ್ಚನೆಯ ಮಾಡುವುದು*
*ಆ ಜಂಗಮ ಬಂದರೆ ತನ್ನ ಲಿಂಗಾರ್ಚನೆಯ ಮಾಣಬೇಕು !*
*ಮಾಡು ಜಂಗಮಾರ್ಚನೆಯ ಮಾಡಬೇಕು*
*ಲಿಂಗದಲೇನುಂಟು ? ಜಂಗಮದಲೇನುಂಟು ? ಎಂದಡೆ*
*ಲಿಂಗದಲ್ಲಿ ಫಲವುಂಟು, ಪದವುಂಟು,*
*ಕುಲವುಂಟು, ಛಲವುಂಟು, [ಭವವುಂಟು]*
*ಜಂಗಮದಲ್ಲಿ ಫಲವಿಲ್ಲ, ಪದವಿಲ್ಲ,*
*ಕುಲವಿಲ್ಲ, ಛಲವಿಲ್ಲ, ಭವವಿಲ್ಲ,*
*ಇದು ಕಾರಣ, ಕೂಡಲ ಚೆನ್ನಸಂಗಮದೇವ !*

*ಜಂಗಮವೆ ಲಿಂಗವೆಂದು ನಂಬಿದನಾಗಿ*
*ಬಸವಣ್ಣ ಸಯಲಿಂಗವಾದ !* ||೨-೧೬||

ಸದ್ಗುರುವಿನಿಂದ ನಿಜದ ಅರುಹನ್ನೂ ಆ ಅರುಹಿನ ಕುರುಹಾದ ಚಿಲ್ಲಿಂಗವನ್ನೂ ಪಡೆದು ಸದಾ ಧಾರಣ-ಅರ್ಚನ-ಅರ್ಪಣಗಳೆಂಬ ಮಾರ್ಗಕ್ರಿಯೆಗಳಲ್ಲಿ ತೊಡಗುವುದು ಲಿಂಗಾಂಗಿಗೆ ಕರ್ತವ್ಯವೆ ಆದರೂ ಆ ಇಷ್ಟಲಿಂಗವೆಂಬುದು ಅರುಹಿನ ಕುರುಹಾಗಿ ಅನಾದಿಜಂಗಮದ ಆಕರ್ಷಣೆಯ ಪರಮೋಪಾಯವೆ ಆಗಿರುವುದರಿಂದ ತಲೆಬಾಗಿಲಲ್ಲಿ ಲಿಂಗಾಂಗಿಯೆಂಬ ಪ್ರಾಣಜಂಗಮವು ಬರಲು ಇಷ್ಟಲಿಂಗಾರ್ಚನೆಯನ್ನು ಸಂಕಲ್ಪವಿಕಲ್ಪವಿಲ್ಲದೆ ಕೂಡಲೆ ತೊರೆದು ಆ ಲಿಂಗಾಂಗಿಯನ್ನು ಎದುರುಗೊಂಡು ವಂದಿಸಿ ಓಲೈಸುವುದು. ಬಂದ ಜಂಗಮವು ಜ್ಞಾನ ಮೂರ್ತಿಯಾದಲ್ಲಿ ಅವನಿಂದ ಶಿಕ್ಷಾಶೀಲಪ್ರಸಾದವನ್ನು ಸ್ವೀಕರಿಸಿ ಕೃತಕೃತ್ಯನಾಗುವುದು. ಬಂದ ಜಂಗಮವು ಮುಗ್ಧಮೂರ್ತಿಯಾದಲ್ಲಿ ಶಿಕ್ಷಾಶೀಲನೈವೇದ್ಯವನ್ನು ನಿವೇದಿಸುವುದು. ಜಂಗಮದಲ್ಲಿ ಜಾತಿ, ಕುಲ, ವರ್ಣ, ಆಶ್ರಮ, ಗೋತ್ರ, ನಾಮವೆಂಬ ಆರು ಮೇಲುಕೀಳು ಭ್ರಾಂತಿಗಳನ್ನು ಆರೋಪಿಸದೆ ಮೇಲುಕೀಳೆಂದು ಕಾಣದೆ ವರ್ತಿಸದೆ ಇವ ನಮ್ಮವ ಇವ ನಮ್ಮವ ಇವ ನಮ್ಮವನೆಂದು ಮನದಿಂದ ನೆನೆದು, ಪರಿಭಾವಿಸಿ, ಇನಿದು ಮಾತಿನಿಂದ ನುಡಿಸಿ, ದಾಸೋಹಂಭಾವದಿಂದ ವರ್ತಿಸಿ, ಓಲೈಸುವುದೆ ಲಿಂಗಾಂಗಿಗೆ ಕಾಯಶುಚಿ, ವಾಕ್ಕುಶುಚಿ, ಮನಶುಚಿಯು! ಅರುಹಿನ ಕುರುಹಾದ ತನ್ನ ಇಷ್ಟಲಿಂಗಕ್ಕೆ ನಾಮಸೀಮೆಗಳುಂಟು. ಅರುಹು ಕುರುಹುಗಳುಳ್ಳ ತನ್ನವನಾದ ಲಿಂಗಾಂಗಿಯೆಂಬ ಪ್ರಾಣಜಂಗಮಕ್ಕೆ ನಾಮಸೀಮೆಗಳಿಲ್ಲ! ಹಾಲುಳ್ಳಲ್ಲಿ ಹಬ್ಬವನ್ನು ಮಾಡಬೇಕು! ಲಿಂಗಾಂಗಿಯು ಬಂದಾಗಲೆ ಗಣಪರ್ವವೆಂದು ಸಡಗರದಿಂದ ಓಲೈಸಬೇಕಲ್ಲದೆ ಭವಿಕಲ್ಪಿತ ಹಾಳುಹಬ್ಬವ್ರತಗಳಲ್ಲಿ ಬಿದ್ದು ತೊಳಲಲಾಗದು.

## || ಸಹಜಮಾಟದಾಸೋಹನಿರ್ದೇಶ ||

*೨೦. ಕಾಮಿಸಿದಲ್ಲದೆ ಕೊಡದು ಕಾಮಧೇನು*
*ಕಲ್ಪಿಸಿದಲ್ಲದೆ ಕೊಡದು ಕಲ್ಪವೃಕ್ಷ*
*ಚಿಂತಿಸಿದಲ್ಲದೆ ಕೊಡದು ಚಿಂತಾಮಣಿ*

*ಭಾವಿಸಿದಲ್ಲದೆ ಕೊಡನು ಶಿವನು*
*ಕಾಮಿಸದೆ ಕಲ್ಪಿಸದೆ ಚಿಂತಿಸದೆ ಭಾವಿಸದೆ*
*ಕೊಡಬಲ್ಲರು ಕೂಡಲ ಚೆನ್ನಸಂಗ ನಿಮ್ಮ ಶರಣರು* ||೨-೧೪||

ಕಾಮಿಸದೆ, ಕಲ್ಪಿಸದೆ, ಚಿಂತಿಸದೆ, ಭಾವಿಸದೆ ಇದ್ದರೂ ಲಿಂಗಾಂಗಿಗಳಿಗೆ ಅರಿವು-ಆಚಾರ-ಅನುಭಾವಗಳೆಂಬ ಶುಚಿಯಾದ ತಿಳಿವಳಿಕೆ, ನಡವಳಿಕೆ, ನೋಟಗಳನ್ನು ಬಸವಾದಿಪ್ರಮಥರ ಶ್ರೀಮತದಂತೆ ಕಂತು ಉಂಡು ಕಾಣಿಸಿ ಕರುಣಿಸಬಲ್ಲ ನಿಜಲಿಂಗಾಂಗಿಶರಣರು ಕಾಮಿಸಿದಲ್ಲದೆ ಕೊಡದ ಜಡಧೇನುವಲ್ಲ ; ಕಲ್ಪಿಸಿದಲ್ಲದೆ ಕೊಡದ ಜಡತರುವಲ್ಲ ; ಚಿಂತಿಸಿದಲ್ಲದೆ ಕೊಡದ ಜಡಶಿಲೆಯಲ್ಲ ಭಾವಿಸಿದಲ್ಲದೆ ಬೇಡಿದಲ್ಲದೆ ನೀಡದ ಭವಿಶೈವಕಲ್ಪನೆಯ ಜಡಶಿವನಲ್ಲ!

**|| ಡಾಂಬಿಕ ಕರ್ಮದುರ್ಭಕ್ತ ತಾಮಸಮಾಟನಿರಸನ ||**

*೨೧. ಮಾಡುವರಯ್ಯಾ ಮಾಡುವರಯ್ಯಾ ಮರುಳುಗೊಂಡಂತೆ !*
*ಮರ್ಮವನರಿಯದ ಮಾಟ*
*ಸಯದಾನದ ಕೇಡು ! ಕರ್ಮದ ಬೆಳೆಸು !*
*ಕೂಡಲ ಚೆನ್ನಸಂಗನ ಶರಣರ ಅನುವನರಿಯದೆ*
*ಮಾಡುವ ಮಾಟ ? ಭವಮಾಟ !* ||೨-೧೫||

ಸತ್ಪಾತ್ರರಾದ ಲಿಂಗಾಂಗಿಗಳಿಗಲ್ಲದೆ ಅಪಾತ್ರರಾದ ಜಡಶೈವಗಳಿಗೂ, ಜಡಭವಿಜನ್ಮಾತ್ಮರಿಗೂ ವ್ಯರ್ಥಭ್ರಾಂತಿಯಿಂದ ಮಾಡಿನೀಡಿದುದೆಲ್ಲವೂ ದಾಸೋಹಗಳೆನಿಸಲ್ಲಿಯ ಕರ್ಮದ ತಿಪ್ಪೆಯನ್ನು ಬೆಳೆಸುವ ಕಮಕಿಟ್ಟ ಕೇಡೇ ಆಗಿ ಪರಿಣಾಮಿಸುವುದು. ಲಿಂಗಾಂಗಿಗೆ ಸಹಜಮಾಟವೆ ಕರ್ತವ್ಯವಲ್ಲದೆ ಉಪಾಧಿಮಾಟ, ನಿರುಪಾಧಿಮಾಟಗಳು ಕರ್ತವ್ಯವಲ್ಲವು.

## || ಭಕ್ತಜಂಗಮಸಹಜಸಂಬಂಧನಿರ್ದೇಶ ||

*೨೨. ಗತಿಪದಮುಕ್ತಿಯ ಬಯಸಿ ಮಾಡುವಾತ ಭಕ್ತನಲ್ಲ*
*ಜೀವನೋಪಾಯಕ್ಕೆ ಬೇಡುವಾತ ಜಂಗಮವಲ್ಲ*
*ಗತಿಪದಮುಕ್ತಿ ಸೂತಕವಿರಹಿತ ಭಕ್ತ !*
*ಹಮ್ಮು ಬಿಮ್ಮು ಗಮನನಾಸ್ತಿ ಜಂಗಮ !*
*ಮಾಡುವಡೆ ಭಕ್ತ ಮಾಟದೊಳಗಿಲ್ಲದಿರಬೇಕು*
*ಬೇಡುವಡೆ ಜಂಗಮ ಕೊಂಬುದರೊಳಗಿಲ್ಲದಿರಬೇಕು*
*ಪ್ರಾಣವಿಲ್ಲದ ಭಕ್ತ ; ರೂಹಿಲ್ಲದ ಜಂಗಮ*
*ಉಭಯಕುಳ ಸಂದಳಿದುದು*
*ಕೂಡಲ ಚೆನ್ನಸಂಗನಲ್ಲಿ ಭಕ್ತ-ಜಂಗಮವೆಂಬೆ* //೨-೧೬//

ಶೈವಸಮುದಾಯವೆ ಶಿವಲೋಕ, ವೈಷ್ಣವಸಮುದಾಯವೆ ವಿಷ್ಣುಲೋಕ. ಲಿಂಗಾಂಗಿ ಪಾಯವೆ ಗಣಲೋಕ ಅಂತಹ ಲೋಗರ ಕಾಣುವುದೆ ಸಾಲೋಕ್ಯ. ಅವರ ಬಳಿಸಾರುವುದೆ ಸಾಮೀಪ್ಯ. ಅವರ ನಡೆನುಡಿಲಾಂಛನಗಳನ್ನು ಅನುಕರಣೆಗೈವುದೆ ಸಾರೂಪ್ಯ. ಅವರಲ್ಲಿಯೆ ಕೂಡಿಬಿಡುವುದೆ ಸಾಯುಜ್ಯವಲ್ಲದೆ ಮತ್ತೊಂದು ಬಗೆಯ ಭಿನ್ನವಾದ ಸತ್ತ ನಂತರದ ನಾಲ್ಕು ಬಗೆಯ ಮುಕ್ತಿಪದಗಳಿಲ್ಲವು ! ಲಿಂಗಾಂಗಿಯು ಸತ್ತ ಬಳಿಕ ಮುಕ್ತಿಪದಗೊಳ್ಳುವ ಹಾಳುಭ್ರಾಂತಿಯನ್ನು ತೊರೆದು ಜಂಗಮಲಿಂಗಾಂಗಿಗಳೆಂಬ ಗಣಭಕ್ತಲೋಗರನ್ನೆ ಸಹಜಮಾಟದಲ್ಲಿ ಕಾಣುವುದು, ಬಳಿ ಸಾರುವುದು, ಅನುರೂಪಗೊಳ್ಳುವುದು. ಒಡವೆರೆಯುವುದಷ್ಟೆ ಸಾಲದು ! ದುರ್ಜ್ಞಾನ, ದುರಾಚಾರ, ದುರ್ಭಾವಗಳೆಂಬ ಪಶುತ್ವದಿಂದ ಬಿಡುಗಡೆಗೊಳ್ಳುವ ನಿಜಮುಕ್ತಿಗಾಗಿ ತನುಶುಚಿಗಾಗಿ ನಿಜ ಆಚಾರವನ್ನೂ, ಮನಶುಚಿಗಾಗಿ ನಿಜದರಿವನ್ನೂ, ಪ್ರಾಣಶುಚಿಗಾಗಿ ನಿಜಾನುಭಾವವನ್ನೂ ಬಸವಬೋಧೆಗೆ ಸಮ್ಮತವಾಗಿಯೆ ನಿಜಾನುಭಾವಿಗಳಿಂದ ಶುಚಿಯಾಗಿ ಹೊಂದಿ ನಿಜಮುಕ್ತಿಯನ್ನು ಇದ್ದಲ್ಲಿಯೆ ಈಗಲೇ ಪಡೆಯುವುದು.

**|| ಅಯಾಚಿತಯಥಾಲಾಭಪ್ರಸಾದಸಂತುಷ್ಟಿ ||**

*೨೩. ಒಲ್ಲೆನೆಂಬುದು ವೈರಾಗ್ಯ ; ಒಲಿದೆನೆಂಬುದು ಕಾಯಗುಣ*
*ಅವ ಪದಾರ್ಥವಾದರೇನು ?*
*ತನ್ನಿಚ್ಛೆಗೆ ಬಂದುದ ಲಿಂಗಾರ್ಪಿತ ಮಾಡಿ ಕೊಂಬುದು*
*ಕೂಡಲ ಚೆನ್ನ ಸಂಗನವೊಲಿಸ ಬಂದ*
*ಪ್ರಸಾದಕಾಯವ ಕೆಡಿಸಲಾಗದು* ||೨-೧೭||

ಬೇಕು-ಬೇಡಗಳೆಂಬ ಸಂಕಲ್ಪ-ವಿಕಲ್ಪಗಳೆರಡನ್ನೂ ಮನದಿಂದ ನಿಜಲಿಂಗಾಂಗಿಯು ತನ್ನೆಡೆಗೆ ಅಯಾಚಿತಸಹಜವಾಗಿ ಬಂದುದ್ದರಲ್ಲಿ ಲಿಂಗಾರ್ಪಣಯೋಗ್ಯವಾದುದನ್ನೆ ಲಿಂಗಾರ್ಪಣಗೈದು ಪ್ರಸಾದರೂಪವಲ್ಲಿಯೆ ಸ್ವೀಕರಿಸುವುದೆ ಪರಮಕರ್ತವ್ಯವು. ಅರಿವು-ಆಚಾರ-ಅನುಭಾವಗಳಿಗೆ ಆಧಾರಾಶ್ರಯಗಳಾದ ಮನ-ತನು-ಪ್ರಾಣಗಳನ್ನು ಜಡೆಭವಿಷಾತ್ಮ್ಯರ ಮುಷ್ಕಾನ ಮರಣಾರ, ಮುಘಾವಗಳಲ್ಲಿ ತಾಮಸ 'ವ್ರತ-ಉಪವಾಸ-ಯೋಗ' ಭ್ರಾಂತಿಗಳಿಂದ ಕಂಗೆಡಿಸಲಾಗದು

**|| ನಿರ್ಲಿಪ್ತಭೋಗತ್ಯಾಗಪ್ರಶಂಸೆ ||**

*೨೪. ಬೇಕೆನಲಾಗದು ಶರಣಂಗೆ , ಬೇಡೆನಲಾಗದು ಶರಣಂಗೆ*
*ಬಂದ ಸುಖವನತಿಗಳೆಯಲಾಗದು ಶರಣಂಗೆ*
*ಇದು ಕಾರಣ, ಕೂಡಲ ಚೆನ್ನ ಸಂಗಯ್ಯ ನಿಮ್ಮ ಶರಣರು*
*ಉಂಡು ಉಪವಾಸಿಗಳು, ಬಳಸಿ ಬ್ರಹ್ಮಚಾರಿಗಳು* ||೨-೧೮||

ಇಂದು ನೆರಳಿಲ್ಲದ ಸುಳಿವು ನಿರ್ಗಮನಿಯಾದ ಆಂತು ಉಪಮಾತೀತವಾದ, ಬಳಿಕ ಬ್ರಹ್ಮಚಾರಿಯಾದ ನಿಜಲಿಂಗಾಂಗಿಯು ಬೇಕುಬೇಡಗಳೆರಡನ್ನೂ ಸುಟ್ಟು ಹೋಕೆಯಿಂದಿರಬೇಕು. ಲಿಂಗಾರ್ಪಣಯೋಗ್ಯವಾದ ಸಕಲಶುಚಿಸುಚಿಗಳನ್ನು ಲಿಂಗಾರ್ಪಣಗೈದ ಪ್ರಸಾದವಾಗಿಯು ನಿಶ್ಶಂಕೆಯಿಂದ ಸುಖಿಸಬೇಕಲ್ಲದೆ ಕಳ್ಳಬಂದಿಕಾರನಂತೆ ಜಪಯೋಗ, ಜಪವ್ರತ, ಜಪೋಪವಾಸ, ಜಪಜಪ, ಜಪಧ್ಯಾನ ಜಪಕರ್ಮಗಳ ಭ್ರಾಂತಿಯಲ್ಲಿ ಭವಿಜನ್ಮಾತ್ಮರುಗಳಂತೆ ಹಸಿದು ಹುಸಿದು ಕಂಗೆಡಬಾರದು.

**|| ಭಕ್ತಮಾಟಸುಪ್ರತಿಷ್ಠಾಕರ್ತವ್ಯ ||**

*ಏಕ ಕಲ್ಪಿತದಿಂದ ಮಾಡುವ ಭಕ್ತ ನಿರ್ಧನಿಕನಾದರೆ*
*ತನ್ನ ಕೈಯ ಧನವ ವೆಚ್ಚಿಸಿ*
*ಆ ಭಕ್ತನ ಕೂಡಿಕೊಂಡು ಲಿಂಗಾರ್ಚನೆಯ ಮಾಡಿ*
*ಅವರ ಮತ್ತೆ ದಾಸೋಹಕ್ಕೆ ನಿಲಿಸಿ*
*ತಾ ಕರ್ತನಾಗಿ ಪರಿಣಾಮಿಸಬಲ್ಲರೆ ಜಂಗಮವೆಂಬೆ*
*ಅವರಿಗೆ ನಮೋ ನಮೋ*
*ಅಂತಲ್ಲದೆ "ಮುನ್ನ ಮಾಡಿದಿರಿ ? ಈಗ ಮಾಡಿರೇನಿಬರೋ ?*
*ಎಂದು ಜರಿದು ಝಂಕಿಸಿ ಹೋಹರ ಜಂಗಮವೆಂಬನೆ ? ಎನ್ನೆನು !*
*ಏನು ಕಾರಣವೆಂದರೆ*
*ಆತ ಸೂನೆಗಾರ , ಆತ ದೋಷಾರ್ಥಿ , ಆತ ಭವಭಾರಿ*
*ಕೂಡಲ ಚೆನ್ನಸಂಗಮದೇವಾ* ||೨-೧೯||

ನಿಜದ ಲಿಂಗಾಂಗಿಯಾದ ಭಕ್ತಸಂಜ್ಞಕನು ಅರ್ಥಸಂಪಾದನೆಯಿಲ್ಲದ ಕಷ್ಟದವನಾಗಿದ್ದರೆ ಬಂದ ಲಿಂಗಾಂಗಿಯಾದ ಜಂಗಮಸಂಜ್ಞಕನು ಹೇವರಿಸಿ ಓಯಾಳಿಸಿ ಮಾತಾಡಲ್ಲವೆಂದು ಮರದೆ

ಅವನಿಗೆ ತಾನೇ ಅರ್ಥಾಪಹಾರಲಗ್ಗೆಯು 'ಜಂಗಮಮಾಟ ಅಜೀವವ್ರತ'ವು ಅವನಿಗೂ ತನಗೂ ಕೆಟ್ಟುಹೋಗದಂತೆ ಸರ್ವಪ್ರಕಾರದಿಂದ ಸಂರಕ್ಷಿಸುವುದು. ಅಂತಲ್ಲದೆ ಕಿತ್ತುಬರಲಿ ಹರಿದುಬರಲಿ ಎಂದು ಮಾಡುವ ಬಡಭಕ್ತನನ್ನು ಬೇಡಿ ಪೀಡಿಸಿ ಕಾಡುವ ತಾಮಸಜಂಗಮವು ಜಡಜಂತುವಲ್ಲದೆ ಶಿಕ್ಷಾಶೀಲಮೂರ್ತಿ ಪ್ರಸಾದಪಾತ್ರ ಜಂಗಮಮೂರ್ತಿಯಲ್ಲವು !

## ೩ ನಿಜಾನುಭಾವಸಂಪಾದನೆಯ ಸ್ಥಲ

**|| ವಚನಾಗಮಪ್ರಶಸ್ತಿ ||**

*೨೬. ಪಾತಾಳದಗ್ಗವಣಿಯ ನೇಣಿಲ್ಲದೆ ತೆಗೆಯಬಹುದೆ ?*
*ಸೋಪಾನದ ಬಲವಿಂದಲ್ಲದೆ ?*
*ಶಬ್ದಸೋಪಾನವ ಕಟ್ಟಿ ನಡೆಯಿಸಿದರು ಪುರಾತರು*
*ದೇವಲೋಕಕ್ಕೆ ಬಟ್ಟೆ ಕಾಣಿರೋ*
*ಮರ್ತ್ಯರ ಮನದ ಮೈಲಿಗೆಯ ಕಳೆಯಲೆಂದು*
*ಗೀತಮಾತೆಂಬ ಜ್ಯೋತಿಯ ಬೆಳಗಿಕೊಟ್ಟರು*
*ಕೂಡಲ ಚೆನ್ನಸಂಗನ ಶರಣರು* //೩-೧//

ನಿಜಲಿಂಗಾಂಗಿಗೆ ಬಸವಾದಿಪ್ರಮಥರು ಲಿಂಗಮುಖದಿಂದ ಕಂಡು ಲಿಂಗವಾಗಿಯೇ ಕರುಣಿಸಿರುವ ಪ್ರಸಾದವಚನಗಳೇ ಧರ್ಮಪಥದಲ್ಲಿನ ಅಮೃತಜಲವು, ಮಹಾಮಾರ್ಗವು, ಸುಪ್ರದೀಪವೂ ಆಗಿವೆ! ಲಿಂಗಾಂಗಿಯು ತಾಮಸವಾದಿಮ ಅನ್ಯಯೋಗ್ಯ ಅನ್ಯಶಾಸ್ತ್ರಗಳೆಂಬ ಉಪ್ಪುನೀರನ್ನು ಕುಡಿದು, ಕಾಡುದಾರಿಯನ್ನು ಹಿಡಿದು, ಕಗ್ಗತ್ತಲೆಯಲ್ಲಿ ಜಡಪತಿತನೂ ನಾಮನಷ್ಟನೂ ಆಗಿಹೋಗಬಾರದು

|| ಅನುಭಾವಪ್ರಾರಮ್ಯ ||

೨೭. ತರುಮರಾದಿಗಳೆಲ್ಲಿಗೆ ಹೋಗಿ ಅನಂತಕಾಲ ತಪಸ್ಸು ಮಾಡುವದು
ಒಂದು ದಿನ ಗುರುಚರಣಸೇವೆ ಸಾಲದೆ ?
ಅನಂತಕಾಲ ಗುರುಚರಣಸೇವೆಯ ಮಾಡುವದು
ಒಂದು ದಿನ ಲಿಂಗಪೂಜೆ ಸಾಲದೆ ?
ಅನಂತಕಾಲ ಲಿಂಗಪೂಜೆಯ ಮಾಡುವದು
ಒಂದು ದಿನ ಜಂಗಮತೃಪ್ತಿ ಸಾಲದೆ ?
ಅನಂತಕಾಲ ಜಂಗಮತೃಪ್ತಿಯ ಮಾಡುವದು
ಒಂದು ನಿಮಿಷ ನಿಮ್ಮ ಶರಣರ ಅನುಭಾವ ಸಾಲದೆ ?
ಕೂಡಲ ಚೆನ್ನಸಂಗಮದೇವಾ ! ||೩-೨||

ಜಪತಪಕ್ಕೆ ದೀಕ್ಷಾಗುರೂಪದೇಶವು ಮಿಗಿಲು. ಸದ್ಗುರೂಪದೇಶಕ್ಕೆ ಅರುಹಿನ ಕುರುಹಿನ ಲಕ್ಷ್ಯಾನುಸಂಧಾನ ಮಿಗಿಲು. ಲಕ್ಷ್ಯಾನುಸಂಧಾನದಿಷ್ಟಲಿಂಗಕ್ಕೆ ಶಿಕ್ಷಾಶೀಲವುಳ್ಳ ಜಂಗಮಾನುಸಂಧಾನವೇ ಮಿಗಿಲು. ಜಂಗಮಶಿಕ್ಷೆಗಿಂತ ನಿಜಶರಣರು ಕಂಡು ಉಂಡು ಕರುಣಿಸಿರುವ ನಿಜಾನುಭಾವ ಪ್ರಸಂಗಗೋಷ್ಠಿಯೇ ಮಿಗಿಲು. ಜಗದೊಳಗೆ ಲಿಂಗಾಂಗಿಗ ಸ್ವಾನುಭಾವಕ್ಕಿಂತ ಮಿಗಿಲಾದದ್ದು ಮತ್ತೊಂದಿಲ್ಲವು ಇಲ್ಲವು ಇಲ್ಲವು

|| ನಿಜ ಅನುಭಾವಮಹಾನಿರ್ಣಯ ||

೨೮. ಅನುಭಾವ ಅನುಭಾವವೆಂದೆಂಬರು

ಅನುಭಾವವೆಂಬುದು ಸೇವ ಮಾರ್ಗಿಯ ನಿಧಾನ ಕಾಣಿರೊ
ಅನುಭಾವವೆಂಬುದು ಅಂತರಂಗದ ಪುಷ್ಟಿ ಕಾಣಿರೊ
ಅನುಭಾವವೆಂಬುದು ರಚ್ಚೆಯ ಮಾತೆ ?
ಅನುಭಾವವೆಂಬುದು ಸಂತೆಯ ಸುದ್ದಿಯೆ ?
ಅನುಭಾವವೆಂಬುದೇನು ಬೀದಿಯ ಪಸರವೆ ?
ಏನೆಂಬೆ ಹೇಳಾ ಮಹಾಘನವ
ಆನೆಯ ಮಾನದೊಳಗಿಕ್ಕಿದರಡಗುದೆ
ದರ್ಪಣದೊಳಡಗುದಲ್ಲದೆ
ಕಂಡ ಕಂಡಲ್ಲಿ ಗೋಷ್ಠಿ , ನಿಂದ ನಿಂದಲ್ಲಿ ಅನುಭಾವ !
ಬಂದ ಬಂದಲ್ಲಿ ಪ್ರಸಂಗವ ಮಾಡುವ ನಿರ್ಬುದ್ಧಿ ನೀಚರ ಮೆಚ್ಚ
ಕೂಡಲ ಚೆನ್ನಸಂಗಮದೇವ ||೩-೩||

ಅನುಭಾವವೆಂಬುದು ಹಾದಿಬೀದಿಯ ಹಗರಣವಲ್ಲ । ಅನುಭಾವವನ್ನು ಉತ್ತಮಾಧಿಕಾರಿಗಳಾದ ಸ್ವಾನುಭಾವಿಗಳೆ ವಸ್ತು-ಸಂಬಂಧ-ಪ್ರಯೋಜನವೆಂಬ ತ್ರಿಪುಟಿಗೊಂತೆ ಜಿಜ್ಞಾಸುವಾದ ಉತ್ತಮಾಧಿಕಾರಿಗಳಿಗೆ ಹೇಳಬೇಕು । ದೇಶಕಾಲ ಉಚಿತಾನುಚಿತ ಪರಿಜ್ಞಾನವಿಲ್ಲದೆ ಜ್ಞಾನವಿಲ್ಲದೆ ತತ್ತ್ವದರ್ಶನವಿಲ್ಲದೆ ಹೇಳಿದ ಕೇಳಿದ ನೀಚಾಶ್ರಿತವಾದ ಅನುಭಾವವು ಹೇಳುಗನಿಗೆ ಕಂಠಶೋಷಣೆಯೆಂಬ ಶಾಕಿನೀ ಮಂತ್ರಶಾಪವು । ಕೇಳುಗನಿಗೆ ಕರ್ಣಶೋಷಣೆಯೆಂಬ ಢಾಕಿನೀ ಮಂತ್ರಶಾಪವು । ಅನಧಿಕಾರದಿಂದ ಅನಧಿಕಾರಿಗಳಿಗೆ ಅಧಿಕಪ್ರಸಂಗವಾಗಿ ಶ್ರದ್ಧೆ, ನಿಷ್ಠೆ, ಅವಧಾನ, ಅನುಭಾವವೆಂಬ ಚತುರ್ಮೂರ್ತಿಗಳಿಲ್ಲದೆ ಬರಿಬಾಯಿಬಡುಕತನದಲ್ಲಿ ಹೇಳಿದ ಅನುಭಾವವು ಜ್ಞಾತೃ, ಜ್ಞಾನ, ಜ್ಞೇಯಗಳೆಂಬ ಮೂರರನ್ನೂ ನಾಮನಷ್ಟಗೊಳಿಸಿ ಆಯುಷ್ಯವನ್ನೇ ಕಾಲಸರ್ಪವಾಗಿ ನುಂಗಿಬಿಡುವುದು ।

|| ಉಪಾಧಿಕ ತಾಮಸಾನುಭಾವನಿರಸನ ||

*೨೯. ಪುರಾತರ ವಚನವ ಕಲಿತು ಹೇಳುವವರನೇನೆಂಬೆ ?
ಅದ ಕುಳ್ಳಿದ್ದು ಕೇಳುವವರನೇನೆಂಬೆ ?
ಅದಕ್ಕೆ ಮನ ನಾಚದವರನೇನೆಂಬೆ ? ಇದು ಕಾರಣ,
ಕೂಡಲ ಚೆನ್ನಸಂಗನಲ್ಲಿ ಶಬ್ದ ನಷ್ಟವಾಗದವರನೇನೆಂಬೆ ?* ||೩-೪||

ಈ ಪ್ರಸಾದವಚನಕ್ಕೆ ಕಾಣ ಬಂದರ್ಥವು !

|| ಉಪಜೀವಕ ತಾಮಸಾನುಭಾವನಿರಸನ ||

*೩೦. ಮಾತ ಕಲಿತು ಮಂಡೆಯ ಬೋಳಿಸಿಕೊಂಡಡೇನು ?
ವೇಷಲಾಂಛನಧಾರಿ ಉದರಪೋಷಕರಪ್ಪರಲ್ಲದೆ
ಆಗಮಾಚಾರಿಯಾಗಲರಿಯರು ಕಾಣಿರೆ !
ಅಷ್ಟವಿಧಾರ್ಚನೆ, ಷೋಡಶೋಪಚಾರಕ್ಕೆ ಸಲ್ಲದದು ಸೀಮೆಯ ಕಲ್ಲು
ಅನ್ಯರ ಬೋಸರಿಸಿ ತನ್ನ ಉದರವ ಹೊರೆವ ವೇಷಡಂಬಕರ ಮೆಚ್ಚ
ನಮ್ಮ ಕೂಡಲ ಚೆನ್ನಸಂಗಮದೇವ !* ||೩-೫||

ಈ ಪ್ರಸಾದ ವಚನಕ್ಕೆ ಕಾಣ ಬಂದರ್ಥವು !

ಸಂಪಾದನೆಯು ಗಿರಿರಾಜದೇವರು

ಪ್ರಾಚೀನ ಪ್ರಾಮಾಣಿಕ ವಚನಾಗಮಗಳಿಂದ ಆಯ್ದು ಸೇರಿಸಿ ನಿರ್ವಚಿಸಿದ

## ಚೆನ್ನಬಸವೇಶ್ವರದೇವರ ೬೦ ವಚನಗಳು ಸಂಪೂರ್ಣಂ ಮಂಗಳಮಹಾಶ್ರೀ

|| ಅರಿವುಆಚಾರಅನುಭಾವಸಿದ್ಧಿರಸ್ತು||
||ಸದ್ಯಸ್ಸ್ವನಿರ್ವಾಣಮಸ್ತು ||
|| ಸಕಲಜೀವಾವಳಿಗೆ ಲೇಸನೇ ಬಯಸುವ ಕೂಡಲ ಸಂಗನ ಶರಣರೆ ಕುಲಜರು

## *ಶ್ರೀ ಚೆನ್ನಬಸವೇಶ್ವರದೇವಾವತರಣ*

.... ದೇವರು ದೇವಿಯರಿಗೆ ಪ್ರಣವಾರ್ತ್ಥವ ಬೋಧಿಸುವಲ್ಲಿ
ದೇವಿಯರ ಮುಡಿಯಲ್ಲಿ ಹೊನ್ನ ತುಂಬಿಯಾಗಿ ಷಣ್ಮುಖದೇವರು
ಕೇಳಿದ ಪ್ರಶ್ನೆಯಿಂದ
ಮರ್ತ್ಯಕ್ಕೆ ಬಂದನೆಂದೆಂಬರಯ್ಯ ಚೆನ್ನಬಸವಣ್ಣನ !
ಸಟೆ ! ಸಟೆ ! ಆ ನುಡಿಯ ಕೇಳಲಾಗದು !
ಅದೇನು ಕಾರಣವೆಂದೊಡೆ,
ಷಡ್ವಿಧ ಸ್ಥಲಕ್ಕೆ ಸ್ಥಾಪನಾಚಾರ್ಯನಾಗಿ ಸಕಲಪ್ರಮಥರ್ಗೆ
ವೀರಶೈವದ ಪ್ರತಿಷ್ಠೆಯ ಮಾಡಲೋಸ್ಕರವಾಗಿ
ಬಂದನಯ್ಯ ಚೆನ್ನಬಸವಣ್ಣನು...

- ಪಟ್ಟಶಿಷ್ಯ ಶ್ರೀಸಿದ್ಧರಾಮೇಶ್ವರದೇವರು (ಜ್ಞಾನಪಟ್ಟ್ಕಲಸಾರ ೧-೫)

ಶ್ರೀಮಚ್ಛಂಕರ ಏವ ಚೆನ್ನಬಸವೋ ಭೂತ್ವಾ ಮುದಾ ಸದ್ಗುರುರ್ಜಾತ
ಸ್ಥಾಪಯಿತುಂ ಭುವಿ ಸ್ವಕೃಪಯಾ ಶ್ರೀ ವೀರಶೈವಂ ತದಾ

- ಶ್ರೀಮುಮ್ಮಡಿ (ಕವಿಸು ಕೃತೀಂದ್ರ) ಕೃಷ್ಣಭೂಪಾಲ (ವೇದಸಂಜೀವನ ಪೀಠಿಕಾ)

ಪ್ರಾಚೀನ ಶರಣರ ಶೈಲಿಯನ್ನು ಅಣಕಿಸಿ ಅವರ ಅಂಕಿತದಲ್ಲಿ ಖೋಟಾ ವಚನಗಳನ್ನು ರಚಿಸುವುದೂ ಮುದ್ರಿಸುವುದೂ ಪ್ರಸಾರಗೈವುದೂ ಅತ್ಯಂತ ಹೇಯವಾದ ಅಕ್ಷಮ್ಯವಾದ ಧರ್ಮದ್ರೋಹವಾಗಿರುತ್ತದೆ! ಜಗತ್ತಿನ ಸುಪ್ರಸಿದ್ಧವಾದ ಸಂರಕ್ಷಿತವಾದ ಆಗಮಗ್ರಂಥಗಳಾದ ಬ್ರಾಹ್ಮಣವೇದ, ಕ್ರೈಸ್ತಬೈಬಲ್, ಇಸ್ಲಾಂ ಕುರಾನ್, ಜೈನಅಂಗ, ಬೌದ್ಧತ್ರಿಪಿಟಕ ಇತ್ಯಾದಿ ಗ್ರಂಥಗಳಲ್ಲಿ ಇಂತಹ ಕುಚೇಷ್ಟೆಗೆ ಖಂಡಿತವಾಗಿ ಅವಕಾಶವಿಲ್ಲ ! ಪವಿತ್ರವಾದ ವಚನಾಗಮಗಳಲ್ಲಿ ಇಂತಹ ಧರ್ಮಸಂರಕ್ಷಣೆ ಇಲ್ಲದಿರುವುದು ಅತ್ಯಂತ ಹೇಯವಾಗಿದೆ ! ೧೯೬೮ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಪ್ರಕಟಿಸಿದ ಶ್ರೀ ಸಿದ್ಧರಾಮೇಶ್ವರ ವಚನಗಳು ಗ್ರಂಥದಲ್ಲಿ ಇಂತಹ ೮೪೮ ಖೋಟಾ ವಚನಗಳಿವೆ ! ಆಗಮ ಶುಚಿಗಾಗಿ ಸರ್ವತ್ಯಾಗಗೈದು ಶ್ರೀ ಸಿದ್ಧರಾಮೇಶ್ವರ ಶುಚಿವಚನಗ್ರಂಥವನ್ನು (1979–1987) ಅವಧಿಯಲ್ಲಿ ಸೊಲ್ಲಾಪುರದಿಂದ ಪ್ರಕಟಗೈದಿದ್ದರೂ ಮೇಲ್ಕಂಡ ೮೪೮ ಖೋಟಾ ವಚನಗಳ ಪೈಕಿ ೮೦೪ನ್ನು 8–4–93ರಂದು ಬಿಡುಗಡೆಗೈದ ಕರ್ನಾಟಕಸರ್ಕಾರದ ಸಮಗ್ರವಚನಸಂಪುಟ (೪) ಜನಪ್ರಿಯ ಆವೃತ್ತಿಯಲ್ಲಿ ಚೆದುರಿಸಿ ಕೆದರಿಸಿ ಬೆರಸಿ ಸಿದ್ಧಗೈದ ವಾರ್ಸಿಟಿ ವಿದ್ವಾಂಸಬಂಧುಗಳು ಪ್ರಕಟಿಸಿದ ಕರ್ನಾಟಕಸರ್ಕಾರ ಈ ಬಗೆಗೆ ನಿರುತ್ತರವಾಗಿವೆ ! ಅವರೆ ಪ್ರಕಟಿಸಿದ ಶಿವಶರಣೆಯರ (ಸರ್ಕಾರೀ) ವಚನಸಂಪುಟದಲ್ಲಿರುವ ಗಂಗಾಂಬಿಕೆಗೆ ಆರೋಪಿತವಾದ ೯ ಖೋಟಾ ವಚನಗಳು ಕುಖ್ಯಾತವಾದ ಮುಕ್ತಿಕಂಠಾಭರಣ ಖೋಟಾಗ್ರಂಥದಲ್ಲಿ ಮಾತ್ರ ಕಂಡು ಬರುತ್ತದೆಯಲ್ಲದೆ ಇನ್ನಾವ ಪ್ರಾಮಾಣಿಕ ಪ್ರಾಚೀನ ವಚನಗ್ರಂಥದ ಇನ್ನಾವ ಪ್ರಾಮಾಣಿಕ ಪ್ರಾಚೀನ ಹಸ್ತ ಪ್ರತಿಗಳಲ್ಲಿಯೂ ಕಂಡು ಬರುವುದಿಲ್ಲ !